(2)

# ಪಂಚಮ

ಮಾನ್ಯ ಓದುಗರೆ,
ಪಂಚಮ ಕಷ್ಟದಲ್ಲಿದೆ. ಚಂದಾ ಹಣ ಇನ್ನೂ ಕೊಡದಿರುವವರು ಮತ್ತು ಚಂದಾ ಅವಧಿ ಮುಗಿದಿರುವವರು ಬೇಗ ತಮ್ಮ ಚಂದಾ ಹಣವನ್ನು ಎಂ. ಓ. ಮೂಲಕ ಕಳುಹಿಸಿ ಸಹಕರಿಸಿ.

—ಸಂಪಾದಕ

ಸಂಪುಟ: ೨ ಬೆಲೆ: ೨೦ ಪೈಸೆ ೧೦-೪-೧೯೭೭ ಸಂಚಿಕೆ: ೧-೨

ಸಮಾಜ ಕಲ್ಯಾಣ ಇನ್ಸ್‌ಪೆಕ್ಟರ್‌ನಿಂದಲೇ

## ಹರಿಜನ ವಿದ್ಯಾರ್ಥಿನಿಯ ಮಾನಭಂಗ ಯತ್ನ

(ವರದಿ: ನಮ್ಮ ಪ್ರತಿನಿಧಿಯಿಂದ)

ಕೋಲಾರ ಜಿಲ್ಲೆಯ ಶ್ರೀನಿವಾಸಪುರದಲ್ಲಿರುವ ಸಾರ್ವಜನಿಕ ಬಾಲಕಿಯರ ವಿದ್ಯಾರ್ಥಿ ನಿಲಯದಲ್ಲಿ ಕಳೆದ ಜನವರಿ 17ರ ರಾತ್ರಿ ಸಮಾಜ ಕಲ್ಯಾಣ ಇಲಾಖೆಯ ಇನ್ಸ್‌ಪೆಕ್ಟರ್ ಮುನಿವೆಂಕಟಪ್ಪನಿಂದ ಹರಿಜನ ಬಾಲಕಿಯೊಬ್ಬಳ ಮಾನಭಂಗ ಪ್ರಯತ್ನ ನಡೆದಿದ್ದು ಈ ಪ್ರಕರಣ ಇಲಾಖೆಗೆ ಸಂಬಂಧ ಪಟ್ಟವರಿಗೆ ಮತ್ತು ಜಿಲ್ಲಾಧಿಕಾರಿಯವರಿಗೆ ತಿಳಿದಿದ್ದರೂ ಅವರ ಬಗ್ಗೆ ಇದುವರೆವಿಗೂ ಯಾವ ಕ್ರಮವನ್ನೂ ತೆಗೆದುಕೊಂಡಿಲ್ಲ.

ಮುನಿವೆಂಕಟಪ್ಪನ ಕಾಮ ಪಿಪಾಸೆಗೆ ಬಲಿಯಾಗಲಿದ್ದ ಹರಿಜನ ಬಾಲಕಿ ಮತ್ತು ಇತರ ನಾಲ್ಕೈದು ಹುಡುಗಿಯರು 17-1-77ರ ರಾತ್ರಿ 12 ಘಂಟೆ ಸಮಯದಲ್ಲಿ ಓದುತ್ತಾ ಕುಳಿತಿದ್ದಾಗ ಹೊರಗೆ ಯಾರೋ ಹಾಸ್ಟೆಲಿನ ಮುಂಬಾಗದ ಬಾಗಿಲನ್ನು ತಟ್ಟುವ ಸದ್ದಾಯಿತು. ಆಗ ಒಳಗೆ ಬಾಗಿಲ ಪಕ್ಕದಲ್ಲೇ ಮಲಗಿದ್ದ ಜವಾನ "ಯಾರೂ ಅಂತಲೂ, ಇಷ್ಟೊತ್ತಿನಲ್ಲಿ ಬಾಗಿಲು ತೆಗೆಯುವುದಿಲ್ಲ" ಎಂದು ಹೇಳಲು ಹೊರಗಿದ್ದವರು ನಾನು ಸೋಷಿಯಲ್ ಇನ್ಸ್‌ಪೆಕ್ಟರ್ ತೆಗೆಯೋ ಬಾಗಿಲು ಅಂತ ಗದರಿಸಿ ಬಾಗಿಲು ತೆಗೆಸಿಕೊಂಡು ಒಳಗೆ ಬಂದಾಗ ಜೊತೆಯಲ್ಲಿಯೇ ಅವರ ಜವಾನ (ಸೋಷಿಯಲ್ ವೆಲ್‌ಫೇರ್ ಆಫೀಸ್) ಅಪ್ಪಾರೆಡ್ಡಿಯೂ ಇದ್ದುದಾಗಿ ಎಚ್ಚರಿದ್ದ ಹುಡುಗಿಯರು ತಿಳಿಸಿರುವರು. ಅವರು ಒಳಗೆ ಬಂದಾಗ ಹಾಸ್ಟೆಲ್ ಜವಾನ ವೆಂಕಟಪ್ಪ ಯಾಕೆಸ್ವಾಮಿ ಇಷ್ಟೊತ್ತಿನಲ್ಲಿ ಬಂದಿರಿ ಎಂದು ಕೇಳಲು ಅವರು ನಾವು ಕಳ್ಳರನ್ನು ಹಿಡಿಯಲು ಬಂದಿದ್ದೇವೆ. ನೀವು ಮಲಗಿಕೊಳ್ಳಿ, ಎಂದು ಹೇಳಿ ಓದುತ್ತಿದ್ದ ಹುಡುಗಿಯರನ್ನು ಮಲಗಿಸಿ ಲೈಟ್ ಆಫ್ ಮಾಡಿದರು ಆಮೇಲೆ ಅಪ್ಪಾರೆಡ್ಡಿ ತನ್ನ ಪಕ್ಕದಲ್ಲೇ ಮಲಗಿಕೊಂಡನೆಂದೂ, ಇನ್ಸ್‌ಪೆಕ್ಟರ್ ಸಿಗರೇಟು ಸೇದುತ್ತಾ ಹಾಲ್‌ನಲ್ಲಿ ಅಡ್ಡಾಡುತ್ತಿದ್ದರೆಂದೂ ಇದೆಲ್ಲಾ ಗಮನಿಸುತ್ತಿದ್ದ ತನಗೆ ಸ್ವಲ್ಪ ಹೊತ್ತಿನ ನಂತರ ನಿದ್ದೆ ಬಂದು ಮಲಗಿದೆನೆಂದು ಹಾಸ್ಟೆಲ್ ಜವಾನ ತಿಳಿಸಿರುವನು.

ಇದಾದ ಸ್ವಲ್ಪ ಹೊತ್ತು ಕಳೆದ ಮೇಲೆ ಮಲಗಿದ್ದ ಹರಿಜನ ಹುಡುಗಿಯ ಹೊದಿಕೆ ಎಳೆದಂತಾಗಲು ಆಕೆ ಎಚ್ಚರಗೊಂಡಾಗ, ಯಾರೊ ಎಂದು ಕೂಗಲು ಯಾರೂ ಮಾತಾಡದಿದ್ದು ಭಯದಿಂದ ಜವಾನನ್ನು ಕೂಗಿಕೊಂಡಾಗ, ಎಲ್ಲಿದ್ದರೋ ಏನೋ ಇನ್ಸ್‌ಪೆಕ್ಟರ್ ಮುನಿವೆಂಕಟಪ್ಪ ಏನಮ್ಮ ಭಯವಾಗುತ್ತಾ ನಾನಿದ್ದೇನೆ ಮಲಗಿಕೋ ಎನ್ನುತ್ತಾ ತನ್ನ ಪಕ್ಕದಲ್ಲೇ ಮಲಗಿಕೊಂಡನೆಂದು ಆ ಹುಡುಗಿ ತಿಳಿಸಿದಳು. ಆತ ಪಕ್ಕದಲ್ಲಿ ಮಲಗಿಕೊಂಡಾಗ ಆಕೆ ಇನ್ನೂ ಹೆದರುತ್ತಾ ಎದ್ದು ಜವಾನ ವೆಂಕಟಪ್ಪನನ್ನು ಎಬ್ಬಿಸಿ ಲೈಟ್ ಹಾಕಲು ಹೇಳಿದಾಗ ಆತ ಎದ್ದು ಲೈಟ್ ಹಾಕಿದನೆಂತಲೂ, ಅಷ್ಟರಲ್ಲಿ ಇವರಿದ್ದಲ್ಲಿಗೇ ಬಂದ ಇನ್ಸ್‌ಪೆಕ್ಟರ್ 'ಏನಮ್ಮ ಭಯವಾಗುತ್ತಾ, ಭಯವಾದರೆ ಮಹಡಿ ಮೇಲೆ ಹೋಗಿ ಮಲಗು ಬಾ' ಎನ್ನುತ್ತ ಕೈ ಹಿಡಿದುಕೊಳ್ಳಲು ಬಂದಾಗ ನಾನು ಹೆದರುತ್ತಾ ಕಿರುಚಿಕೊಂಡು ಅಡಿಗೆಯ ನಾಗಮ್ಮ ಮಲಗಿದ್ದ ಮನೆಕಡೆ ಓಡಿಹೋದೆನೆಂದು ಆಕೆ ತಿಳಿಸಿರುವಳು. ಅಷ್ಟರಲ್ಲಿ ಈ ಗಲಾಟೆಯಿಂದ ಎಚ್ಚರಗೊಂಡಿದ್ದ ನಾಗಮ್ಮ ತನ್ನ ಹತ್ತಿರ ಬಂದ ಆ ಹುಡುಗಿಯನ್ನು ಗಮನಿಸಿದಾಗ ಆಕೆ ಹೆದರಿ ಬೆವತುಕೊಂಡು ನಡುಗುತ್ತಿದ್ದು, ಬಂದವಳೇ ತನ್ನನ್ನು ಹೊರಗಡೆ ಕರೆದುಕೊಂಡು ಹೋದಳೆಂದೂ, ಹೋಗುವಾಗ ಇನ್ಸ್‌ಪೆಕ್ಟರನ್ನು

(6 ನೇ ಪುಟ ನೋಡಿ)

### ಕಾಂಗ್ರೆಸ್ಸಿನ ದಲಿತೋದ್ಧಾರದ ವೈಖರಿ

ಲೋಕಸಭೆಯ ಚುನಾವಣೆಯ ಮತದಾನಕ್ಕಿಂತ ಮುಂಚೆ ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ಹುಲಕುಂಟೆ ಗ್ರಾಮದ ಹರಿಜನರಿಗೆ ಕಾಂಗ್ರೆಸ್ ಸರಕಾರ ಎತ್ತು ಹಂಚುವ ಕಾರ್ಯಕ್ರಮ ಏರ್ಪಡಿಸಿತ್ತು. ಅದಕ್ಕಾಗಿ ಆ ಗ್ರಾಮದ ಶ್ರೀಮಂತರ ಒಕ್ಕಲಿಗರ ಮನೆಯಿಂದ 12 ಜೊತೆ ಭಾರಿ ಎತ್ತಿನ ಜೋಡಿಗಳನ್ನು ಕಾಲೋನಿಗೆ ತಂದರು. ಕಾಲೊನಿಯ ಕೆಲವು ಹರಿಜನ ಯುವಕರಿಗೆ, ಹಿರಿಯರಿಗೆ ಎತ್ತಿನ ಮೂಗುದಾರ ಹಿಡಿದುಕೊಂಡು ಠೀವಿಯಿಂದ ನಿಲ್ಲಲು ಸರಕಾರಿ ಅಧಿಕಾರಿಗಳು ಹೇಳಿ ಫೋಟೋ ತೆಗೆಸಿದರು.

ಫೋಟೋ ತೆಗೆಸಿದ ತಕ್ಷಣ ಎತ್ತುಗಳನ್ನು ಅವುಗಳ ಮಾಲಿಕರು ಹಿಡಿದುಕೊಂಡು ಹೋದರು.

"ಎತ್ತಿನ ಗ್ರಾಂಟ್ ಬಂದೈತೆ; ಸುಮ್ನೆ ಕೊಡಾಕಾಗಲ್ಲ. ಅದ್ಕೇ ಫೋಟೋ ತೆಗೆದಮೇಲೆ ಕೊಡ್ತೀವಿ" ಅಂತ ಸರಕಾರಿ ಅಧಿಕಾರಿಗಳು ಹೇಳಿದ್ದರಿಂದ ಹರಿಜನರು ಫೋಟೋ ತೆಗೆಸಿಕೊಳ್ಳಲು ಒಪ್ಪಿದ್ದರಂತೆ.

ಈವರೆಗೂ ಅಲ್ಲಿಯ ಹರಿಜನರಿಗೆ ಎತ್ತು ಸಿಕ್ಕಿಲ್ಲ, ಕರಾನೂ ಸಿಕ್ಕಿಲ್ಲ.

ಹೇಗಿದೆ ಕಾಂಗ್ರೆಸ್ಸಿನ 20 ಅಂಶಗಳ ವೈಖರಿ ?

# ಅಂಬೇಡ್ಕರ್ ರಾಘವೇಂದ್ರಸ್ವಾಮಿಯಾಗದಿರಲಿ

ಅಂಬೇಡ್ಕರ್ ! ಭಾರತನಾಡಿನ ಕೋಟಿ ಕೋಟಿ ದಲಿತರನ್ನು ಹುಚ್ಚೆಬ್ಬಿಸುವ ಹೆಸರು. ಇನ್ನೂ ಜೋರಾಗಿ ಹೇಳಿದರೆ ಅವರ ನರಗಳನ್ನು ಹುರಿಗೊಳಿಸುವ ಹೆಸರು. ಆದ್ದರಿಂದ ಮಂತ್ರಶಕ್ತಿ ಉಳ್ಳ ಈ ಹೆಸರನ್ನು ಯಾರು ಯಾವುದಕ್ಕೆ ಯಾವಾಗ ಬೇಕಾದರೂ ಬಳಸಿಕೊಳ್ಳಬಹುದು. ದಲಿತರನ್ನು ಮೇಲೆತ್ತಲು ಪಾಡುಬಿದ್ದ ಅಂಬೇಡ್ಕರ್ ಹೆಸರನ್ನು ದಲಿತರನ್ನು ತುಳಿಯಲೂ ಬಳಸಿಕೊಳ್ಳಬಹುದು. ಅದು ಆಯಾ ಸಂದರ್ಭ ಮತ್ತು ವ್ಯಕ್ತಿಗಳನ್ನು ಅವಲಂಬಿಸಿದೆ.

ಆದರೆ ಎಚ್ಚೆತ್ತ ದಲಿತರು ಅಂಬೇಡ್ಕರ್‌ರವರನ್ನು ದೇವರ ಜಾಗಕ್ಕೆತಳ್ಳದೆ ದಲಿತ ಸಂಘಟನೆಯ ಸಾಧನವನ್ನಾಗಿ ಬಳಸಿಕೊಳ್ಳಬೇಕಾಗಿದೆ. ಒಡೆದು ಪಾಲುಪಾಲಾಗಿರುವ ನೂರು ದಲಿತ ಮನಸುಗಳನ್ನು ಒಂದೇ ಕೇಂದ್ರ ಬಿಂದುವಿಗೆ ತಂದು ನಿಲ್ಲಿಸುವ ಮೋಹಕ ಮ್ಯಾಗ್ನೆಟ್ ಅಂಬೇಡ್ಕರ್ ಆಗಬೇಕು.

ದಲಿತ ಜನತೆಯ ಮೇಲೆ ನಿತ್ಯ ನಡೆಯುತ್ತಿರುವ ಅಮಾನವೀಯ ದಬ್ಬಾಳಿಕೆ ಕೊನೆಗಾಣಬೇಕಾದರೆ ಇವರ ನಡುವೆ ಬಿರುಗಾಳಿಯ ರಭಸದಲ್ಲಿ ಅಂಬೇಡ್ಕರ್ ವಿಚಾರಧಾರೆಯ ಪ್ರಚಾರ ಆಗಬೇಕು. ಜನರನ್ನು ಹಳ್ಳಿಯ ಮಟ್ಟದಿಂದ ಕ್ರಾಂತೀಕಾರೀ ಸಂಘಟನೆಯೊಂದಕ್ಕೆ ಒಳಗುಮಾಡುವ ಕೆಲಸ ಆಗಬೇಕು. ಇಲ್ಲದಿದ್ದರೆ ಅಂಬೇಡ್ಕರ್ ನಮಗೊಂದು ಸುಂದರ ನೆನಪು ಆಗುವುದರಲ್ಲಿ ಅನುಮಾನವಿಲ್ಲ.

ಅಂಬೇಡ್ಕರ್‌ರವರನ್ನು ದಲಿತರ ಹಿರಿಯ ಕಾಮ್ರೇಡ್ ಎಂದು ಭಾವಿಸೋಣ. ಅಂಬೇಡ್ಕರ್ ಒಬ್ಬರದಲ್ಲ, ಪ್ರಪಂಚದ ಎಲ್ಲ ಕ್ರಾಂತೀಕಾರೀ ಸಿದ್ಧಾಂತಗಳ ಅಧ್ಯಯನಕ್ಕೆ ದಲಿತ ಯುವಕರು ಸಿದ್ಧರಾಗಬೇಕು. ಇಲ್ಲದಿದ್ದರೆ ನಾವೆಲ್ಲ 'ಅಂಬೇಡ್ಕರ್' ಭಕ್ತರ ಮಟ್ಟದಲ್ಲೇ ಬೆಳವಣಿಗೆಯಿಲ್ಲದೆ ನಿಂತುಬಿಡುವ ಅಪಾಯವಿದೆ.

ದಲಿತರ ಬದುಕಿನಲ್ಲಿ ಅಂಬೇಡ್ಕರ್ ಸಿಟ್ಟಿನ, ಪ್ರತಿಭಟನೆಯ ಬೀಜ ಬಿತ್ತಿ ಹೋಗಿದ್ದಾರೆ. ಅಷ್ಟರಿಂದಲೇ ನಮ್ಮ ಬದಲಾವಣೆ ಆಗುವುದಿಲ್ಲ. ಎಲ್ಲರೂ ಅದರ ಬೆಳವಣಿಗೆಗೆ ಪ್ರಾಮಾಣಿಕವಾದ ಪ್ರಾಣಮಯ ಕಾಣಿಕೆಗಳನ್ನು ಅರ್ಪಿಸಲು ತಯಾರಾಗಬೇಕು.

ಇವತ್ತು ಅಂಬೇಡ್ಕರ್‌ರವರ 96 ನೇ ಹುಟ್ಟು ಹಬ್ಬವನ್ನು ಆಚರಿಸಲು ಸಿದ್ಧತೆ ಆಗುತ್ತಿದೆ. ಹೀಗೆ ವರ್ಷಕ್ಕೊಂದು ದಿನ ದಲಿತರೆಲ್ಲ ಹಣ ಸಂಗ್ರಹಿಸಿ ಹುಟ್ಟಿದ ಹಬ್ಬ ಮಾಡುವುದು ತಪ್ಪಲ್ಲದಿದ್ದರೂ ಅಂಬೇಡ್ಕರ್ ಉತ್ಸವ ಅಂಬೇಡ್ಕರ್ ಭಜನೆ ಪೂಜೆಗಳು, ಯಾವ ದೇವರಿಗೂ ಕಡಿಮೆಯಿಲ್ಲದ ಆರಾಧನೆಗಳಿಗೆ ಸ್ವತಹ ಅಂಬೇಡ್ಕರ್‌ರವರೇ ಕಡು ವಿರೋಧಿಯಾಗಿದ್ದರು ಎಂಬ ವಿಚಾರವನ್ನು ಅರಿತುಕೊಳ್ಳಬೇಕು. ಅಂಬೇಡ್ಕರ್ ಬಯಸಿದ್ದು ಸಂಘಟನೆ ಮತ್ತು ಹೋರಾಟ. ಅದನ್ನು ದಲಿತರಿಗೆ ಹೇಳದೆ ಅನೇಕ ಅಳುಬುರುಕ ಅವಕಾಶವಾದಿ ದಲಿತ ನಾಯಕರು ಇಂಥ ಸಭೆಗಳಲ್ಲಿ ಅಂಬೇಡ್ಕರ್ ಹುಟ್ಟಿದ ರೀತಿ, ಬೆಳೆದ ಬಗೆ, ಸತ್ತ ಸಂಗತಿಗಳನ್ನು ಗುಣಗಾನ ಮಾಡಿ ಹಾರಹಾಕಿಸಿಕೊಂಡು ಮನೆಗೆ ಹೋಗುವುದು ವಂಚನೆಯ ಇಲ್ಲವೇ ದಡ್ಡತನದ ಕೆಲಸವಾಗಿದೆ. ಪ್ರಜ್ಞಾವಂತ ದಲಿತರು ಈ ಮೃತ ಸಂಪ್ರದಾಯವನ್ನು ಮುರಿಯಬೇಕಾಗಿದೆ. ಅಂಬೇಡ್ಕರ್‌ರವರನ್ನು ದಲಿತರ ರಾಘವೇಂದ್ರ ಸ್ವಾಮಿಯನ್ನಾಗಿ ಮಾಡಲು ನಡೆಯುತಿರುವ ಕುತಂತ್ರವನ್ನು ತಡೆಯಬೇಕಾಗಿದೆ.

—ಸಿದ್ಧಲಿಂಗಯ್ಯ

## ದುರಂತ ತಪ್ಪಿಸಿ ದುರಂತಕ್ಕೀಡಾದ ಜಗಜೀವನರಾಂ

ಫೆಬ್ರುವರಿ ಎರಡನೆಯ ದಿನಾಂಕ ಇಡೀ ದೇಶದ ರಾಜಕೀಯವನ್ನೇ ನಡುಗಿಸಿದ ಚರಿತ್ರಾರ್ಹವಾದ ದಿನ. ಅಂದು ಕಾಂಗ್ರೆಸ್ ಪಕ್ಷದ ಹಿರಿಯ ನಾಯಕರಾಗಿದ್ದ ಜಗಜೀವನರಾಮ ಅವರು ಅನೇಕ ಪ್ರಮುಖ ನಾಯಕ–ನಾಯಕಿಯರೊಡನೆ ಸರ್ವಾಧಿಕಾರದ ಕಾಂಗ್ರೆಸ್ಸಿನ ಎದೆಗೊದ್ದು ಹೊರಬಂದು ಜನತಂತ್ರಕ್ಕಾಗಿ ಕಾಂಗ್ರೆಸ್ ಪಕ್ಷ ಸ್ಥಾಪಿಸಿದಾಗ ಜನರಲ್ಲಿಯ ಭಯಾನಕ ಚಿಂತನೆ ದೂರವಾಯಿತು. ಆಗ ಆಡಳಿತ ಕಾಂಗ್ರೆಸ್ಸಿಗೆ ಬದಲಾಗಿ ಪ್ರಚಂಡವಾದ ಪರ್ಯಾಯ ಸರ್ಕಾರ ರಚಿಸುವುದು ಸಾಧ್ಯವಿದೆ ಎಂದು ಎಲ್ಲರೂ ಸಂತೃಪ್ತಿಯ ನಿಟ್ಟುಸಿರು ಬಿಟ್ಟರು.

ಕ್ರೂರ ಕಾಂಗ್ರೆಸ್ ಗದಗದ ನಡುಗುವಂತೆ ಮಾಡಿದ ಬಾಬೂಜಿ ಜಗಜೀವನರಾಂ ಅವರು ರಾಜೀನಾಮೆ ಕೊಟ್ಟದ್ದಕ್ಕೆ ಎಷ್ಟು ಪ್ರಾಮುಖ್ಯತೆ ಕೊಡಬೇಕೋ ಅಷ್ಟೇ ಪ್ರಾಮುಖ್ಯತೆಯನ್ನು ಅವರು ಯಾವ ಸಂದರ್ಭದಲ್ಲಿ ತಮ್ಮ ರಾಜೀನಾಮೆ ಕೊಟ್ಟರು ಎನ್ನುವದಕ್ಕೂ ಕೊಡಬೇಕಾಗುತ್ತದೆ. ಅವರ ಈ ಸಂದರ್ಭೋಚಿತ ತೀಕ್ಷ್ಣ ಬುದ್ಧಿಯೇ ಈ ದೇಶದ ಭವಿಷ್ಯ ಬರೆಯಿತೆಂದು ಹೇಳಬೇಕು.

ತುರ್ತುಪರಿಸ್ಥಿತಿ ಜಾರಿಯಾದ ತಕ್ಷಣ ಅಥವಾ ಚುನಾವಣೆಗಳನ್ನು ಘೋಷಿಸುವದಕ್ಕಿಂತ ಮುಂಚೆ ಅವರೇನಾದರೂ ರಾಜೀನಾಮೆ ಕೊಟ್ಟದ್ದರೆ ಇಲ್ಲಿ ಅನಿರ್ದಿಷ್ಟ ಕಾಲದವರೆಗೆ ಚುನಾವಣೆಗಳೇ ನಡೆಯುತ್ತಿರಲಿಲ್ಲ. ಇಂದಿರಾರವರ ಕ್ರೂರ ಸರ್ವಾಧಿಕಾರ ತನ್ನ ಬೇರುಗಳನ್ನು ಬೆಳೆಸುತ್ತಿತ್ತು. ಭಾರತೀಯರ ಗುಲಾಮಗಿರಿ ಶಾಸನಬದ್ಧವಾಗುತ್ತಿತ್ತು.

ಜನತಾ ಪಕ್ಷ ಗಿಟ್ಟಿಸಿದ 270 ಸ್ಥಾನಗಳ ಹಿಂದೆಯೂ ಜಗಜೀವನರಾಮ್‌ರವರ ವ್ಯಕ್ತಿತ್ವ ತನ್ನ ಪ್ರಬಲವಾದ ಪ್ರಭಾವ ಬೀರಿರುವದು ಜೆ. ಪಿ, ಕೃಪಲಾನಿಯವರಿಂದ ಹಿಡಿದು, ಜನತಾ ಪಕ್ಷದ ಎಲ್ಲಾ ನಾಯಕರಿಗೂ, ಪ್ರತಿಯೊಬ್ಬ ಶ್ರೀಸಾಮಾನ್ಯನಿಗೂ ಗೊತ್ತಿದ್ದ ಮಾತೆ ಆಗಿದೆ. 30 ವರ್ಷಗಳಿಂದ ಜನತೆಯ ಮೆದುಳಲ್ಲಿ ಬೇರೂರಿದ್ದ ಕಾಂಗ್ರೆಸ್ಸಿನ ಹುಚ್ಚನ್ನು ಬಿಡಿಸುವದರಲ್ಲಿ ಅಗ್ರಗಣ್ಯ ಪಾತ್ರ ವಹಿಸಿದ, ಆಡಳಿತದ ವಿವಿಧ ಕ್ಷೇತ್ರಗಳಲ್ಲಿ ಅಪರಿಮಿತ ಅನುಭವ ಹೊಂದಿರುವ ಜಗಜೀವನರಾಮ್‌ರವರೇ ಈ ರಾಷ್ಟ್ರದ ಪ್ರಧಾನಮಂತ್ರಿಯಾಗಲು ಅರ್ಹರು ಎಂದು ಈ ದೇಶದ ನಿಷ್ಪಕ್ಷ ಪಾತ, ಪ್ರಾಮಾಣಿಕ ಜನತೆ ತಿಳಿದುಕೊಂಡಿತ್ತು. ಆದರೆ ಅವರ ಈ ತಿಳುವಳಿಕೆ ಬುಡಮೇಲಾಗಿದ್ದು–ಪ್ರಜಾಸತ್ತಾತ್ಮಕ ರೀತಿಯಲ್ಲಿ ಚುನಾವಣೆ ನಡೆಸದೇ ಮುರಾರ್ಜಿ ದೇಸಾಯಿಯವರೇ ಪ್ರಧಾನಮಂತ್ರಿ ಎಂಬ ದಿಢೀರ್ ಪ್ರಕಟನೆ ಹೊರಬಂದಾಗ ಅನೇಕ ಮುಖಂಡರ ಸಮಾಲೋಚನೆಯಿಂದ ಅಥವಾ 'ಸಹಜವಾಗಿ' ನಡೆದ ಈ ಜಾಣ ಕಾರ್ಯ ಈ ದೇಶದಲ್ಲಿ ಹೊಲೆಮಾದಿಗರ ಶೋಷಣೆ ಹಳ್ಳಿಯಿಂದ ಹಿಡಿದು ದಿಲ್ಲಿಯವರೆಗೂ ಎಷ್ಟೊಂದು ಸೂಕ್ಷ್ಮವಾಗಿ ನಡೆದಿದೆ ಎಂಬುದಕ್ಕೆ ಜೀವಂತ ಸಾಕ್ಷಿ.

ಇಂಥ ತಾಯ್‌ಗಂಡತನದ ಕೃತ್ಯಗಳಿಗೆ ಒಂದೇ ಒಂದು ಪರಿಹಾರ: ಅಸ್ಪೃಶ್ಯರೆಲ್ಲ ತಮ್ಮ–ತಮ್ಮಲ್ಲಿಯ ಭಿನ್ನಾಭಿಪ್ರಾಯಗಳನ್ನು ಮರೆತು, ಶೋಷಣೆಯ ಆಧಾರದ ಮೇಲೆ, ಸಂಘಟಿತರಾಗುವದು ; ಈ ದೇಶದ 20 ಕೋಟಿ ಹೊಲೆಮಾದಿಗರು "ಒಂದು" ಎಂದು ಸ್ಪಷ್ಟಪಡಿಸುವದು.

## ಮಹಾರಾಜ ಕಾಲೇಜು ಹಾಸ್ಟಲಿನ

# ಅಧ್ಯಕ್ಷ, ನಿಲಯಪಾಲರಿಂದ ಅನ್ಯಾಯಕ್ಕೆ ಕುಮ್ಮಕ್ಕು

[ವರದಿ : ಪಂಚಮ ಪ್ರತಿನಿಧಿಯಿಂದ]

ಮಾರ್ಚಿ 7ರಂದು ಮೈಸೂರು ಮಹಾರಾಜ ಕಾಲೇಜು ಹಾಸ್ಟಲಿನ ವಾರ್ಷಿಕ ಸಮಾರಂಭ. ಇಲ್ಲಿನ ಒಟ್ಟು ವಿದಾರ್ಥಿಗಳ ಸಂಖ್ಯೆ 170. ಇವರಲ್ಲಿ 80 ಜನ ಹರಿಜನ–ಗಿರಿಜನ ವಿದ್ಯಾರ್ಥಿಗಳು ಈ ವಾರ್ಷಿಕ ಸಮಾರಂಭದಲ್ಲಿ ಭಾಗ ವಹಿಸಲಿಲ್ಲ. ತಮಗೆ ಆಗಿರುವ ಅನ್ಯಾಯಗಳನ್ನು ಪ್ರತಿಭಟಿಸಲು ಈ ಸಮಾರಂಭವನ್ನು ಬಹಿಷ್ಕರಿಸಿದರು. ಆದರೆ ಈ 50 ಪರ್ಸೆಂಟ್ ದಲಿತ ವಿದ್ಯಾರ್ಥಿಗಳಿಗೆ ಆಗಿರುವ ಅನ್ಯಾಯಗಳಿಗೆ ನ್ಯಾಯದೊರಕಲಿಲ್ಲ ಬದಲಿಗೆ ದಲಿತರಿಲ್ಲದ ಸಮಾರಂಭ ಸೊಗಸಾಗಿ ನಡೆಯಿತು. ವಿದ್ಯಾರ್ಥಿ ನಿಲಯದ ಅದ್ಯಕ್ಷ ಶಂಕರ ಲಿಂಗಯ್ಯ ವಾರ್ಡನ್ H. V. ನಾರಾಯಣ ಮೇಲ್ಜಾತಿಯ ವಿದ್ಯಾರ್ಥಿಗಳನಷ್ಟೆ ನಿಲ್ಲಿಸಿ, ತಾವು ಕುಂತು ಫೋಟೊ ತೆಗೆಸಿಕೊಂಡು ಹೋದರು. ತಾವೇ ನಿಂತು ಸಮಾರಂಭ ನಡೆಸಿದರು. ಹಾಸ್ಟಲ ಮುಂದೆ ಇನ್ನೂ ಪೋಲೀಸ್ ವ್ಯಾನುಗಳು ನಿಂತಿವೆ.

ಮೇಲ್ಜಾತಿಯ 10 ಜನ ವಿದ್ಯಾರ್ಥಿಗಳು ಪ್ರತಿಭಟಿಸಿದ್ದರೂ ನಿಂತು ಹೋಗುತ್ತಿದ್ದ ಈ ಸಮಾರಂಭ ಈಗ 80 ಜನ ದಲಿತ ವಿದ್ಯಾರ್ಥಿಗಳು ಬಹಿಷ್ಕಾರ ಹಾಕಿದರೂ ನಿಲ್ಲದೆ ನಡೆದಿರುವುದಕ್ಕೆ ವಿದ್ಯಾರ್ಥಿನಿಲಯದ ಅಧ್ಯಕ್ಷ ಶಂಕರಲಿಂಗಯ್ಯ ಪೂರ್ತಿ ಕಾರಣವಾಗಿದ್ದಾನೆ ಎಂದು ಗೊತ್ತಾಗಿದೆ. ಇದಕ್ಕೆ ಸಮ್ಮತಿಸಿದಂತೆ ಸಾಕ್ಷಿಯಾಗಿ ದಲಿತ ವಿದ್ಯಾರ್ಥಿಗಳು ಒಬ್ಬರೂ ಭಾಗವಹಿಸದ ಸಮಾರಂಭಕ್ಕೆ ಅಧ್ಯಕ್ಷ ಶಂಕರಲಿಂಗಯ್ಯ ಮತ್ತು ವಿದ್ಯಾರ್ಥಿ ಕ್ಷೇಮ ಪಾಲಕ ಉ. ಕಾ. ಸುಬ್ಬರಾಯಾಚಾರ್ ಅವರು ಹೂವಿನ ಹಾರ ಹಾಕಿಸಿಕೊಂಡು ನಗುತ್ತಾ ಭಾಗಿಯಾಗಿದ್ದರು.

**ಬಹಿಷ್ಕಾರದ ಹಿಂದೆ**

ದಲಿತ ವಿದ್ಯಾರ್ಥಿಗಳೆಲ್ಲ ಈ ಸಮಾರಂಭವನ್ನು ಭಹಿಷ್ಕರಿಸಿದುದಕ್ಕೆ ಕಾರಣಗಳು ಈ ರೀತಿ ಇವೆ :

ವಿದ್ಯಾರ್ಥಿನಿಲಯದ ವಾರ್ಷಿಕೋತ್ಸವ ಅಂಗವಾಗಿ ಕ್ರೀಡೆಗಳನ್ನು ಏರ್ಪಡಿಸಲಾಗಿತ್ತು. ಬೆಳಿಗ್ಗೆ 7 ಗಂಟೆಗೆ ಅಥ್ಲೆಟ್ಸ್ ಆಟಗಳು ಎಂದು ಪ್ರಕಟಿಸಲಾಗಿತ್ತು. ಅದರಂತೆ ದಲಿತ ವಿದ್ಯಾರ್ಥಿಗಳೆಲ್ಲ 7 ಗಂಟೆಗೆ ಆಟದ ಮೈದಾನಕ್ಕೆ ಹೋದರು. ಆದರೆ 7 ಗಂಟೆಗಾಗಲೇ ಆಟಗಳು ಮುಗಿಯುತ್ತಾ ಬಂದಿದ್ದವು. ತಮಗೆ ಆದ ಈ ಅನ್ಯಾಯದ ಬಗ್ಗೆ ಅಧಿಕಾರಿಗಳಿಗೆ ದೂರು ಕೊಡಲು ದಲಿತ ವಿದ್ಯಾರ್ಥಿಗಳು ಹೋದರು. ಅಲ್ಲಿಂದ ವಾಪಸ್ಸು ಬರುವಷ್ಟೊತ್ತಿಗೆ ಎಲ್ಲ ಆಟಗಳೂ ಮುಗಿದು ಹೋಗಿದ್ದು, ದಲಿತ ವಿದ್ಯಾರ್ಥಿಗಳಿಲ್ಲದೆಯೇ ಆಟಗಳೆಲ್ಲ ನಡೆದು ಪ್ರೈಜುಗಳೆಲ್ಲ ಮೇಲ್ಜಾತಿ ವಿದ್ಯಾರ್ಥಿಗಳಿಗೆ ಸಿಕ್ಕಿದುವು. ಇದನ್ನು ಉಗ್ರವಾಗಿ ಪ್ರತಿಭಟಿಸಿದ ದಲಿತ ವಿದ್ಯಾರ್ಥಿಗಳು ಕ್ರೀಡೆಗಳನ್ನು ಪುನಃ ನಡೆಸುವಂತೆ ಒತ್ತಾಯಿಸಿದರು. ಆದರೆ ಇವರ ಬೇಡಿಕೆಗಳಿಗೆ ವಿದ್ಯಾರ್ಥಿನಿಲಯದ ನಿಲಯ ಪಾಲಕರಾಗಲಿ ಅಧ್ಯಕ್ಷರಾಗಲಿ ಸಮ್ಮತಿಸಲಿಲ್ಲ.

ಇದೇ ಸಮಯಕ್ಕೆ ಏಪ್ರಿಲ್ 1ನೇ ತಾ|| ಶುಕ್ರವಾರ ಮರಿಸ್ವಾಮಿ ಎಂಬ ದಲಿತ ವಿದ್ಯಾರ್ಥಿ ತನ್ನ ಸ್ನೇಹಿತ ವೀರಭದ್ರಸ್ವಾಮಿ ಬರುವುದು ತಡವಾಗುವುದರಿಂದ ಊಟ ಇಡಬೇಕೆಂದು ವಿದ್ಯಾರ್ಥಿ ನಿಲಯದ ಕುಕ್ಕರ್ ಕುಮಾರನಿಗೆ ತಿಳಿಸಿದ್ದ. ಆದರೆ 11 ಗಂಟೆಯಷ್ಟೊತ್ತಿಗೆ ಬಂದು ನೋಡಿದಲ್ಲಿ ಊಟ ಇಟ್ಟಿರಲಿಲ್ಲ. ಮೇಲ್ಜಾತಿ ವಿದ್ಯಾರ್ಥಿಗಳು ಹೇಳಿದಾಗ ಎಷ್ಟೊತ್ತಾದರೂ ಊಟ ಇಟ್ಟಿರುತ್ತಿದುದನ್ನು ಮರಿಸ್ವಾಮಿ ಕಣ್ಣಾರೆ ನೋಡಿದ್ದ. ಇದರಿಂದಾಗಿ ಮರಿಸ್ವಾಮಿ ಕುಕ್ಕರ್ ಕುಮಾರನನ್ನು ತರಾಟೆಗೆ ತೆಗೆದುಕೊಂಡ. ಆದರೆ ಕೋಪಗೊಂಡ ಕುಮಾರ ಒಂದು ಗಾಜಿನ ಕಪ್ಪನ್ನು ಹೊಡೆದು ಗಾಜನ್ನು ಕೈಯಲ್ಲಿ ಹಿಡಿದು ನಿಂತ. ಇದರಿಂದ ಭಯಗೊಂಡ ಮರಿಸ್ವಾಮಿ ಕುಮಾರನನ್ನು ನಡುವಿನ ಬೆಲ್ಟಿನಿಂದ ಹೊಡೆದ ಎಂದು ಗೊತ್ತಾಗಿದೆ.

ಇದನ್ನು ತಿಳಿದ ಮೇಲ್ಜಾತಿ ವಿದ್ಯಾರ್ಥಿಗಳು ಮರಿಸ್ವಾಮಿಯನ್ನು ಹಾಸ್ಟಲಿನಿಂದ ತೆಗೆದು ಹಾಕುವಂತೆ ಹಾಸ್ಟೆಲಿನ ವಾರ್ಡನ್ ಮತ್ತು ಅಧ್ಯಕ್ಷರನ್ನು ಒತ್ತಾಯಿಸಿದರು.

ಆದರೆ ಮರಿಸ್ವಾಮಿಯನ್ನು ಹಾಸ್ಟಲಿಂದ ತೆಗೆಯಲು ಒತಾಯಿಸಿದ ಈ ಮೇಲ್ಜಾತಿ ವಿದ್ಯಾರ್ಥಿಗಳೇ ಒಂದು ತಿಂಗಳ ಹಿಂದೆ ಹಾಸ್ಟಲಿನ ಕೆಲಸದ ಮಾಯಣ್ಣ ಎಂಬುವನನ್ನು ಚನ್ನಾಗಿ ಥಳಿಸಿ ಹಿಂಸಿಸಿದ್ದರು ಎಂದು ಗೊತ್ತಾಗಿದೆ. ಈ ವಿಷಯ ವಾರ್ಡನ್‌ಗೂ ಗೊತ್ತಿದ್ದು ಮಾಯಣ್ಣನನ್ನು ಹೊಡೆದ ವಿದ್ಯಾರ್ಥಿಗಳ ಮೇಲೆ ಯಾವ ಕ್ರಮವನ್ನು ತೆಗೆದುಕೊಳ್ಳಲಿಲ್ಲ ಎಂದು, ಆದರೆ ಈಗ ಮರಿಸ್ವಾಮಿ ಮತ್ತು ಕುಕ್ಕರ್ ಕುಮಾರನ ಮಧ್ಯೆ ನಡೆದ ಜಗಳವನ್ನು ದೊಡ್ಡದು ಮಾಡಿ ಮೇಲ್ಜಾತಿ ವಿದ್ಯಾರ್ಥಿಗಳು ಮರಿಸ್ವಾಮಿಯನ್ನು ಹಾಸ್ಟಲಿನಿಂದ ತೆಗೆಯಬೇಕೆಂದು ಒತ್ತಾಯಿಸಿರುವುದು ಶೋಚನೀಯ ಎಂದು ದಲಿತ ವಿದ್ಯಾರ್ಥಿಗಳೆಲ್ಲ ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್, ಡಿ. ಸಿ. ಮತ್ತು ವಿದ್ಯಾರ್ಥಿನಿಲಯದ ಅಧ್ಯಕ್ಷರಿಗೆ ದೂರು ಕೊಟ್ಟರು. ಆದರೆ ಡಿ. ಸಿ. ಡೀನ್ ಮತ್ತು ವಿದ್ಯಾರ್ಥಿನಿಲಯದ ಅಧ್ಯಕ್ಷರು ಸಭೆ ಸೇರಿ ದಲಿತ ವಿದ್ಯಾರ್ಥಿ ಮರಿಸ್ವಾಮಿಯನ್ನು ಒತ್ತಾಯಿಸಿ 'ತಾನು ಕುಮಾರನಿಗೆ ಹೊಡೆದದ್ದಕ್ಕೆ' ಕ್ಷಮೆ ಕೇಳಿಸಿದರೆಂದು, ಹಿಂದೆ ಮೇಲ್ಜಾತಿ ವಿದ್ಯಾರ್ಥಿಗಳು ಹಾಸ್ಟಲಿನ ಮಾಯಣ್ಣ ಎಂಬ ಕೆಲಸದವನಿಗೆ ಹೊಡೆದದ್ದರ ಪ್ರಸ್ತಾಪವನ್ನೇ ಮಾಡಲಿಲ್ಲ ಎಂದು ಗೊತ್ತಾಗಿದೆ. ಅಲ್ಲದೆ ಮರಿಸ್ವಾಮಿಗೆ ಅನಿರ್ದಿಷ್ಟ ಕಾಲ ಹಾಸ್ಟಲಿನಿಂದ ಊಟ ಕೊಡುವುದನ್ನು ನಿಲ್ಲಿಸಿ ವಾರ್ಡನ್ ಅವರು ಒಂದು ನೋಟೀಸು ಕಳುಹಿಸಿದ್ದಾರೆ "ಪರೀಕ್ಷೆ ಹತ್ತಿರ ಇರುವುದರಿಂದ ನಾನು ಹೇಗೆ ಓದಬೇಕೆಂಬುದೇ ತಿಳಿಯುತ್ತಿಲ್ಲ" ಎಂದು ಮರಿಸ್ವಾಮಿ ಅಸಹಾಯಕರಾಗಿದ್ದಾರೆ.

**ಸಮಾರಂಭಕ್ಕೆ ಭಹಿಷ್ಕಾರ**

ಹೀಗೆ ಎಲ್ಲಾ ಮಟ್ಟದಲ್ಲೂ ತಮಗೆ ಆದ ಅನ್ಯಾಯಗಳನ್ನು ಪ್ರತಿಭಟಿಸಲು ಮತ್ತು ನ್ಯಾಯಕ್ಕಾಗಿ ಒತ್ತಾಯಿಸಲು ದಲಿತ ವಿದ್ಯಾರ್ಥಿಗಳಿಗೆ ಇದ್ದ ಒಂದೇ ಒಂದು ಮಾರ್ಗ ಏಪ್ರಿಲ್ 7ರ ವಿದ್ಯಾರ್ಥಿನಿಲಯದ ವಾರ್ಷಿಕ ಸಮಾರಂಭವನ್ನ ಬಹಿಷ್ಕರಿಸುವುದು. ಆದರೆ ತಾವೆಲ್ಲ ಬಹಿಷ್ಕರಿಸಿದರೂ ನಿಲ್ಲದೆ ನಡೆದುಹೋದ ಈ ಸಮಾರಂಭದಿಂದಾಗಿ ಮುಂದೆ ನಮಗೆ ಯಾರಿಂದಲೂ ನ್ಯಾಯ ದೊರಕುವುದಿಲ್ಲ ಎನ್ನುವ ಭಯ ಉಂಟಾಗಿದೆ. ಆದರೆ ಇದಕ್ಕೆಲ್ಲ ಮುಖ್ಯ ಕಾರಣವಾಗಿರುವ ವಿದ್ಯಾರ್ಥಿನಿಲಯದ ಅಧ್ಯಕ್ಷ ಶಂಕರಲಿಂಗಯ್ಯ ಮತ್ತು ನಿಲಯಪಾಲ ಎಚ್. ವಿ. ನಾರಾಯಣ ಇವರನ್ನು ತರಾಟೆಗೆ ತೆಗೆದುಕೊಳ್ಳುವವರು ಯಾರು? ದಲಿತ ವಿದ್ಯಾರ್ಥಿಗಳಿಗೆ ನ್ಯಾಯ ದೊರಕಿಸುವವರು ಯಾರು ?

○ ○ ○ ○ ○

ಯಾರೋ, ಯಾವ ಮಹಾತ್ಮನೋ, ಯಾವುದೋ ರಾಜಕೀಯ ಪಕ್ಷ ನಿಮ್ಮನ್ನು ರಕ್ಷಿಸುತ್ತದೆ, ಉದ್ಧಾರ ಮಾಡುತ್ತದೆಂಬ ಹುಚ್ಚು ನಂಬಿಕೆ ಬೇಡ. ನಿಮ್ಮ ನಿಮ್ಮ ಬದುಕುಗಳ ಹೊಣೆಗಾರಿಕೆ ನಿಮ್ಮ ಮೇಲೇ ಇದೆ.

—ಅಂಬೇಡ್ಕರ್

# ಹಳ್ಳಿಗಳಲ್ಲಿ ಉಲ್ಬಣಗೊಳ್ಳುತ್ತಿರುವ ವೈಷಮ್ಯ:

(ವರದಿ: ವಿಜಯ ಪಾಟೀಲ)

30 ವರ್ಷಗಳ ತನಕ ಕಾಂಗ್ರೆಸ್ ಸರಕಾರ ಅಧಿಕಾರದಲ್ಲಿದ್ದರೂ ಹರಿಜನರಿಗಾಗುವ ಅನ್ಯಾಯಗಳಿಗೆ ಸಂಪೂರ್ಣ ತಡೆಬಿದ್ದಿಲ್ಲ. ಆ ಸರಕಾರ ಹರಿಜನರನ್ನು ಅವರ ದುಃಖ ದುಮ್ಮಾನ ಅವಮಾನಗಳಿಂದ ಸಂಪೂರ್ಣ ವಿಮೋಚನೆ ಮಾಡುವ ಬಗ್ಗೆ ಎಂದೆಂದಿಗೂ ಯೋಚಿಸಿಲ್ಲ. ಪ್ರಜಾಪ್ರಭುತ್ವದ ಉಳಿವಿನ ಸಂಕೇತವಾಗಿ ಆರಿಸಿ ಬಂದಿರುವ ಜನತಾ ಪಕ್ಷ ಈ ಬಗ್ಗೆ ಏನು ಮಾಡುತ್ತದೆಂಬುದನ್ನು ಕಾದು ನೋಡಬೇಕು.

ಯಾವುದೇ ಸರಕಾರ ಆಡಳಿತಕ್ಕೆ ಬಂದರೂ ಹರಿಜನ–ಗಿರಿಜನರ ಕಣ್ಣೀರೊರೆಸಲು ಕೊಡುತ್ತಿರುವ ಸವಲತ್ತುಗಳನ್ನು ಕೊಡಲೇಬೇಕು– ಎಂಬುದನ್ನು ಅರಿಯದ ಉಚ್ಚಜಾತಿಯ ಜಮೀನ್ದಾರರು, ಕಾಂಗ್ರೆಸ್ ಪಕ್ಷ ದಿಢೀರ್, ಅನಿವಾರ್ಯ ಸೋಲು ಅನುಭವಿಸಿದ ತಕ್ಷಣ, ಹರಿಜನರಿಗೆ ಚಿತ್ರಹಿಂಸೆ ಕೊಡತೊಡಗಿದ್ದಾರೆ. ಇಂಥ ಅನ್ಯಾಯಗಳು ಅನೇಕ ಕಡೆಗಳಲ್ಲಿ ನಡೆಯುತ್ತಿವೆ ಎಂಬುದು ಗೊತ್ತಿದ್ದರಿಂದ, ಅಲ್ಲಿಯ ನಿಜವಾದ ಪರಿಸ್ಥಿತಿ ಅರಿತುಕೊಂಡುಬರುವ, ಅಲ್ಲಿಯ ಹರಿಜನರಿಗೆ ಧೈರ್ಯ ತುಂಬಿಬರುವ ಉದ್ದೇಶದಿಂದ ನಾನು, ರಾಮದೇವ ರಾಕೆ, ಮಲ್ಲಿಕಾರ್ಜುನ ಮೂವರೂ ಕೂಡಿ ಮಾರ್ಚ 31 ನೇ ತಾರೀಖು ಮೈಸೂರು ಜಿಲ್ಲೆಯ ಕೊಣನೂರಿಗೆ ಹೋದಾಗ ಅನೇಕ ನಗ್ನ ಸತ್ಯಗಳು ಬಯಲಿಗೆ ಬಂದವು.

### ಋಣ ವಿಮೋಚನೆ

25 ವಯಸ್ಸಿನ ನಂಜ, ಲಿಂಗಾಯತ ಕೋಮಿಗೆ ಸೇರಿದ ಮಾದಪ್ಪನಿಗೆ 4 ವರ್ಷಗಳ ಹಿಂದೇ ತನ್ನ ಒಂದೆ ಒಂದು ಎಕರೆ ಜಮೀನನ್ನು ಭೋಗ್ಯಕ್ಕೆ ಹಾಕಿ 800ರೂ. ಇಸಿದುಕೊಂಡಿದ್ದನಂತೆ. 'ಋಣ ವಿಮೋಚನೆ' ಕಾನೂನು ಬಂದಾಗ, ಗ್ರಾಮಸೇವಕನು ಮಾದೇವಪ್ಪನವರಿಗೆ ಆ ಬಗ್ಗೆ ತಿಳಿಸಿದಾಗ, 'ಜೋಳದ ಫಸಲು ತಕ್ಕಂಡು ಬಿಟ್ಬಿಡ್ತೀನಿ ಹೊಡಕೊಂಡಹೋಗು" ಎಂದು ನಂಜನಿಗೆ ಹೇಳಿದ.

ಖುಷಿಗೊಂಡ ನಂಜ ಆ ಹೋಲ ಉತ್ತಿ ಹುಳ್ಳಿಬಿತ್ತಿದ. ಆ ಹುಳ್ಳಿ ಕುಯ್ಲಿಗೆ ಬಂದಾಗ 'ಮಾದೇವಪ್ಪನವರೇ ರಾತ್ರೋರಾತ್ರಿಲಿ ಕಿತ್‌ಗಂಡ ಹೋದ್ರು' ಎಂದು ನಂಜ ನಮಗೆ ತಿಳಿಸಿದ. ಆ ಸಂದರ್ಭದಲ್ಲಿ ನಂಜ ಮಾದೇವಪ್ಪನವರ ಹತ್ತಿರ ಹೋಗಿ ವಿಚಾರಿಸಿದಾಗ ಮಾದೇವಪ್ಪ, ಅವನ ತಂದೆ ಮಾದಪ್ಪ, ಅವರ ಸಂಬಂಧಿಕರಾದ ನಾಗರಾಜಪ್ಪ, ಪುಟ್ಟಣ್ಣ, ಮಲ್ಲಣ್ಣ ಹೊಡೆಯುವ ಬೆದರಿಕೆ ಹಾಕಿದರಂತೆ. ಈ ಘಟನೆ ನಡೆದದ್ದು 3 ತಿಂಗಳ ಹಿಂದೆ.

ಈಗ ಅದೇ ಮಾದೇವಪ್ಪ "ದುಡ್‌ಕೊಡು ನಿನ್ನ ಜಮೀನ್ ಬುಡ್ತೀನಿ. ಕೊಡದೇಹೋದ್ರೆ ಯಾವ್ನು ಬಂದ್ರೂ ಬಿಡೋದಿಲ್ಲ. ನಿನ್ನ ತರಪು ಹೊಲದಾಗ ಹೂತಾಕ್ತೀನಿ" ಎಂದು ಬೆದರಿಕೆ ಹಾಕುತ್ತಿದ್ದಾನಂತೆ.

ಮಾರ್ಚ್ 29ನೇ ತಾರೀಖಿನಂದು ಮಾದೇವಪ್ಪನೇ ಆ ಜಮೀನಿಗೆ ಸಾಗು ಮಾಡಿದ್ದಾನೆ.

ಮಾದಯ್ಯ ನಂಜನ ಅಣ್ಣ. ಇವನು ಲಿಂಗಾಯಿತ ಸುಬ್ಬಪ್ಪನಿಗೆ ತನ್ನ ಒಂದು ಎಕರೆ ಜಮೀನನ್ನು ಇಂದಿರಾರವರ ಕಾನೂನು ಬರುವುದಕ್ಕಿಂತ ಮುಂಚೆ ಒಂದು ವರ್ಷದ ಹಿಂದೆ 450 ರೂ. ಗಳಿಗೆ ಭೋಗ್ಯಕ್ಕೆ ಹಾಕಿದ್ದ. ಕಾನೂನಿನ ಪ್ರಕಾರ ಭೂಮಿ ಬಂತು. ವರ್ಷದ ಎರಡನೇ ಫಸಲನ್ನು ಇವನೇ ತೆಗೆದುಕೊಂಡ. ಆದರೆ ಸುಬ್ಬಪ್ಪ ಮಾರ್ಚ್ 30ನೇ ತಾರೀಖಿನಂದು ಆ ಒಂದು ಎಕರೆಯಲ್ಲಿ ಅರ್ಧಭಾಗವನ್ನು ತಾನೇ ಸಾಗು ಮಾಡಿದ್ದಾನೆ. ಕಾರಣ ಕೇಳಿದರೆ ಮತ್ತೆ ಅದೇ ಹಾಡು. 'ದುಡ್‌ಕೊಡು ಬಿಟ್ಬುಡ್ತೀನಿ' 'ನನ್‌ತಾವೇ ದುಡ್ಡಿಲ್ಲ. ಕಾನೂನಿನಂತೆ ಕೊಡು' 'ಹಂಗಾದ್ರೆ ನಾನೇ ಉತ್ಕೋತೀನಿ ಕೊಡಾಕಿಲ್ಲ ಹೋಗು'.

### ಸಾಲಕ್ಕಾಗಿ ಹಲ್ಲೆ

ಇದೇ ಮಾದಯ್ಯ ಶಿವಪ್ಪ (ಲಿಂಗಾಯಿತ)ನಿಗೆ 40 ರೂ. ಸಾಲ ಕೊಡಬೇಕಂತೆ. 6 ತಿಂಗಳ ಹಿಂದಿನದು. ಶಿವಪ್ಪನದೊಂದು ಹೋಟೆಲ್ಲಿದೆ. ಅಲ್ಲಿ ತಿಂಡಿ ತಂದು ತಿಂದಿದ್ದಕ್ಕೆ ಒಂದಕ್ಕೆ ಎರಡರಷ್ಟು ಲೆಕ್ಕ ಹಚ್ಚಿ ಅಂತೂ 40 ರೂ. ಆಗಿದೆ. ಮಾದಯ್ಯನಿಗೆ ತನ್ನ ಕಡುಬಡತನದಿಂದಾಗಿ ಸಾಲ ತೀರಿಸುವುದಾಗಿಲ್ಲ.

ಮಾರ್ಚ್ 26ನೇ ತಾರೀಖಿಗೆ ಶಿವಪ್ಪನ ಮಗ ಕುಳ್ಳಯ್ಯ ಮಾದಯ್ಯನನ್ನು ಅಮಾನುಷವಾಗಿ ಥಳಿಸಿದ್ದಾನೆ.

ಮಾರ್ಚ್ 29ನೇ ತಾರೀಖಿಗೆ ಮತ್ತೆ ಶಿವಪ್ಪ 'ದುಡ್‌ಕೊಡು' ಅಂದಾಗ ಮಾದಯ್ಯ ಹೆದರಿಕೊಂಡು ಮಾತಾಡ್ಲಿಲ್ಲವಂತೆ. ಆಗ, 'ನನ್‌ಮಗನೇ ದುಡ್‌ಕೊಡು ಇಲ್ಲದಿದ್ರೆ ನಿನ್ನ ಎತ್ತು ಹಿಡಕಂಡು ಹಟ್ಟಿಗೆ ಕಟ್ಕೋತೀನಿ' ಎಂದು ಬೆದರಿಸಿದನಂತೆ.

### ಹೋಟಲಿಗೆ ಪ್ರವೇಶವಿಲ್ಲ

ನಾವು ಮೂರುಜನ ಹರಿಜನ ಕೇರಿಗೆ ಹೋಗುವುದಕ್ಕಿಂತ ಮುಂಚೆ ಶಿವಪ್ಪನ ಹೋಟೆಲ್ಲಿಗೆ ಕಾಫಿ ಕುಡಿಯಲು ಹೋಗಿದ್ದೆವು. ನಮ್ಮ ಜಾತಿಯು ಅವನಿಗೆ ಗೊತ್ತಾಗದ್ದರಿಂದ ನಮಗೆ ಒಳಗೆ ಪ್ರವೇಶ ಸಿಕ್ಕಿತು. ಆದರೆ ಬಾಗಿಲದ ಹೊಸ್ತಿಲ ಆಚೆ ಕುಳಿತು ಒಬ್ಬ ಹರಿಜನ ಮನುಷ್ಯ ತನ್ನ ಮನೆಯಿಂದಲೇ ತಂದ ಅಲ್ಯೂಮಿನಿಯಂ ಲೋಟದಲ್ಲಿ ಚಹ ಕುಡಿಯುತ್ತಿದ್ದ. ನಾನು ಶಿವಪ್ಪನಿಗೆ, "ಹರಿಜನರ್ನ ಹೋಟೆಲ್ಲಿಗೆ ಸೇರ್ಸಾಕಿಲ್ವಾ? ಅಂತ ಅವನ ಭಾಷೆಯಲ್ಲೇ ಕೇಳಿದಾಗ", "ಅವರ್ನ ಹ್ಯಾಗೆ ಸೇರ್ಸಾಕಾಗತ್ತೆ" ಅಂತಂದ.

### ಜೀತ ನಿರ್ಮೂಲನೆ

ಲೋಕಸಭೆಯ ಚುನಾವಣೆಯ ಮತದಾನಕ್ಕಿಂತ ಮುಂಚೆ ಕರ್ನಾಟಕ ರಾಜ್ಯಸರಕಾರದ ಒಂದು ಪ್ರಕಟಣೆಯಲ್ಲಿ ಕರ್ನಾಟಕದಲ್ಲಿರುವ ಎಲ್ಲಾ ಜೀತದಾಳುಗಳನ್ನು ಬಿಡುಗಡೆ ಮಾಡಲಾಗಿದೆ ಎಂದು ತಿಳಿಸಲಾಗಿತ್ತು.

o o o

ಕೊಣನೂರಿನ ಹರಿಜನ ಸಿದ್ದಯ್ಯ ಮತ್ತು ಸಿದ್ದಮ್ಮ ಇವರ ಮಕ್ಕಳಾದ 15 ವರ್ಷದ ಗುರುಸಿದ್ದಯ್ಯ 9 ವರ್ಷಗಳಿಂದ ಮತ್ತು 12 ವರ್ಷದ ಮಾದೇವಮ್ಮ 2 ವರ್ಷಗಳಿಂದ ಕೊಣನೂರಿನ ಪಟೇಲರ ಅಜ್ಜಪ್ಪನ ಮನೆಯಲ್ಲಿ ಇನ್ನೂ, ಈವತ್ತೂ ಕೂಡಾ ಜೀತಮಾಡುತ್ತಿದ್ದಾರೆ. ಯಾವ ಕಾನೂನೂ ಇವರಿಬ್ಬರನ್ನು ಜೀತದ ದಾಸ್ಯದಿಂದ ತಪ್ಪಿಸಿಲ್ಲ.

ಸಾಲಕ್ಕಾಗಿ ಹೊಡೆತ ತಿಂದ ಮಾದಯ್ಯನ ಮಗ ಬಸಯ್ಯ (14 ವರ್ಷ) 400 ರೂ. ಗಳಿಗಾಗಿ ಕೆಂಚವ್ವ ನಿಂಗಪ್ಪನ ಜವನಪ್ಪನ ಮನೆಯಲ್ಲಿ 3 ವರ್ಷಗಳಿಂದ ಜೀತಮಾಡುತ್ತಿದ್ದಾನೆ.
ಬಸಯ್ಯನಿಗಿಂತ ಮೊದಲು ಅವನ ಅಣ್ಣ ರಂಗಯ್ಯ 5 ವರ್ಷ ಜೀತ ಮಾಡಿ 18ನೆಯ ವಯಸ್ಸಿನಲ್ಲಿ ಸತ್ತುಹೋದನು. ಅದೇ 400 ರೂಪಾಯಿಯ ಸಲುವಾಗಿ ಅವನ ಸ್ಥಾನವನ್ನು 3 ವರ್ಷಗಳಿಂದ ಬಸಯ್ಯ ಭರ್ತಿಮಾಡಿದ್ದಾನೆ.

# ಕೊಣನೂರಿನ ಶ್ರೀಮಂತರಿಂದ ದಲಿತರಿಗೆ ಚಿತ್ರಹಿಂಸೆ

ಜೀತನಿರ್ಮೂಲನೆ ಕಾನೂನು ಬಂದಮೇಲೆ ಬಸಯ್ಯನನ್ನು ಮನೆಗೆ ಕಳಿಸಿದ ಸಾಹುಕಾರ, ಒಂದುತಿಂಗಳು ಮುಗಿಯುವುದರೊಳಗೆ, ಬಸಯ್ಯ "ಒಲ್ಲೆ" ನೆಂದು ಎಷ್ಟೇ ಹೇಳಿದರೂ ಬಲವಂತದಿಂದ ಅವನನ್ನು ಜೀತಕ್ಕೆಟ್ಟುಕೊಂಡಿದ್ದಾನೆ,

**ವಂಶ ಪಾರಂಪರ್ಯದ ಜೀತ**

ದೊಡ್ಡರಂಗ, ಚಿಕ್ಕರಂಗ, ಪುಟ್ಟರಂಗ ಈ ಮೂವರು ತಂದೆ ಯಿಲ್ಲದ ತಬ್ಬಲಿಗಳು. ಏಳೇಳು ವರ್ಷದವರಿದ್ದಾಗಲೇ ಮೂವರೂ ಅಣ್ಣ–ತಮ್ಮಂದಿರು ಚೇರಮನ್ ಗುರುಲಿಂಗಪ್ಪ (ಲಿಂಗಾಯತ) ನ ಮನೆಯಲ್ಲಿ ಕೇವಲ 700ರೂ. ಗಾಗಿ ಜೀತಕ್ಕೆ ಸೇರಿದರು.

7 ವರ್ಷಗಳ ಹಿಂದೆ ಇವರ ತಂದೆ ಸಿದ್ದಯ್ಯ ಸತ್ತನಂತರ ಚೇರ್‌ಮನ್‌ರಿಗೆ, "ಎಷ್ಟು ದುಡ್ಡಿದೆ" ಅಂತ ಕೇಳಿದಾಗ ನೂರು ಸಾವಿರ ರೂ (!) ಅಂತ ಹೇಳಿದರು.

ಈ ಮೂವರೂ ತಮ್ಮ ಕುಟುಂಬದ (ಅವರಿಗೆ ಇಬ್ಬರು ತಂಗಿ ಯರು, ಇಬ್ಬರು ಅಕ್ಕಂದಿರು ಮತ್ತು ತಾಯಿ ಇದ್ದಾರೆ) ಬೆನ್ನೆಲುಬಾಗಿದ್ದ 2 ಎಕರೆ ಜಮೀನನ್ನು ನಾಗಪ್ಪನಿಗೆ (ಲಿಂಗಾಯತ) "ಹಣವಾಪಸ್ ಕೊಡಗಂಟ ಉಣ್ಣುವ" ಕರಾರಿನಮೇಲೆ ಒಂದೂವರೆ ಸಾವಿರ ರೂ. ತೆಗೆದುಕೊಂಡು ಒಂಬತ್ತು ವರ್ಷಗಳವರೆಗೆ ಆ ಹೊಲದಲ್ಲಿ ತಾವು 'ಕಾಲಿಡದ' ನಿರ್ಣಯ ಕೈಗೊಂಡರು.

ಆ ಒಂದೂವರೆ ಸಾವಿರದಲ್ಲಿ ಒಂದು ಸಾವಿರ ರೂ. ಗಳನ್ನು ಚೇರ್‌ಮನ್‌ನಿಗೆ ಕೊಟ್ಟು, ಮೂವರಲ್ಲಿ ಕೇವಲ ಒಬ್ಬ (ದೊಡ್ಡರಂಗ) ಹೊರಬಂದ. ಆ ಮೇಲೆ ಗುಲಾಮಗಿರಿ ಸಹಿಸಲಿಕ್ಕಾಗದೇ ಹೊರಬಂದ ಚಿಕ್ಕರಂಗ ಭಯದಿಂದಾಗಿ ತನ್ನ ಹುಟ್ಟೂರು ಬಿಟ್ಟು ಮಂಡ್ಯಕ್ಕೆ ಹೋದ. ಈಗಲೂ ಅಲ್ಲೇ ಇರುವ ಅವನು ಬೆಲ್ಲ ಬೇಯಿಸುವ ಕೆಲಸ ಮಾಡುತ್ತಿದ್ದಾನೆ.

ತೀರ ಇತ್ತೀಚೆಗೆ ಜೀತನಿರ್ಮೂಲನಾ ಕಾನೂನು ಬಂದಮೇಲೆ ಪುಟ್ಟರಂಗ ಹೊರಬಂದಿದ್ದಾನೆ.

ಜನತಾಪಕ್ಷ ಕೇವಲ ಶ್ರೀಮಂತರ ಪರವಾದ ಪಕ್ಷವೆಂದು ಕಲ್ಪನೆ ಹೊಂದಿರುವ ಕೊಣನೂರಿನ ಶ್ರೀಮಂತ ಲಿಂಗಾಯತರು ಹರಿಜನರಿಗೆಲ್ಲ 'ಮತ್ತೆ ಜೀತಕ್ಕೆ ಬನ್ರೋ. ನಿಮ್ಮ ಕಾಂಗ್ರೆಸ್ ಹೋಯ್ತು, ಎಂದು ಆಹ್ವಾನಿಸುತ್ತಿದ್ದಾರೆ.

ನಮ್ಮ ಮೂವರ ಹೊಲಸು ಬಟ್ಟೆಗಳಿಂದಾಗಿಯೋ, ನಮ್ಮ ಮಾತಿನಿಂದಾಗಿಯೋ ಅಥವಾ ಮಾತು ಮೀರಿದ ನಮ್ಮ ಭಾವನೆ ಗಳಿಂದಾಗಿಯೋ ಏನೋ ನನ್ನನ್ನೆಲ್ಲ ತಮ್ಮ ನಂಬಿಕೆಗೆ ತೆಗೆದು ಕೊಂಡ ಅಲ್ಲಿಯ ಹರಿಜನರು ತುಂಬಾ ಆತ್ಮೀಯವಾಗಿ ನಮ್ಮೊಡನೆ ಮಾತನಾಡಿದರು.

ಅಲ್ಲಿಯ ಜನರಿಗೆಲ್ಲ ನಾವೆಲ್ಲ ಮುಖ್ಯವಾಗಿ ಹೇಳಿದ್ದು: ಈ ಎಲ್ಲಾ ಅನ್ಯಾಯಗಳ ವಿರುದ್ಧ ನೀವು ಸಂಘಟಿತರಾಗಬೇಕು. ಸರಕಾರಿ ಅಧಿ ಕಾರಿಗಳು ಹೆಚ್ಚಾಗಿ ಮೇಲ್ಜಾತಿಯವರೇ ಆಗಿರುವುದರಿಂದ ಅವರಿಂದ ಯಾವುದೇ ರೀತಿಯ ಹೆಚ್ಚಿನ ಸಹಾಯ ನಾವು ಬಯಸಬಾರದು. ಅದಕ್ಕೆ ಉತ್ತರವಾಗಿ ನಾವು ಒಗ್ಗಟ್ಟಾದರೆ, ನಿಮ್ಮ ಕೇರಿಯಲ್ಲಿಯ ಯಾವನಾದರೊಬ್ಬನಿಗೂ ಏನಾದರೂ ಅನ್ಯಾಯ ನಡೆದರೆ ನೀವೆಲ್ಲ ಕೂಡಿ ಪ್ರತಿಭಟಿಸಿದರೆ, ಪ್ರಸಂಗ ಬಂದರೆ ಪ್ರಾಣಕೊಡುವ ಛಲ ನಿಮ್ಮಲ್ಲಿದ್ದರೆ ಯಾವ ಸಂಪ್ರದಾಯದ ನಾಯಿಕುನ್ನಿಯೂ ನಿಮ್ಮ ಮುಂದೆ ಬಾಲ ಅಲ್ಲಾಡಿಸುವುದಿಲ್ಲ.

**ಊರಲ್ಲೇ ಪ್ರತಿಭಟನೆ**

ನಮ್ಮ ಪತ್ರಿಕೆಗೆ ಒಂದು ಒಳ್ಳೆಯ ಸುದ್ದಿ ಸಿಗುತ್ತದೆಂಬ ಉದ್ದೇಶ ದಿಂದಲೇ ಇಂಥ ಘಟನೆಗಳನ್ನು ವರದಿ ಮಾಡಿಕೊಂಡು ಹೋಗುವ ಅನೇಕ ಜನರನ್ನು ಇಲ್ಲಿಯ ಹರಿಜನರು ನೋಡಿ ಒಂದು ನಮೂನೆಯ ತಿರಸ್ಕಾರದ ಮನೋಭಾವನೆಯನ್ನು ಬೆಳೆಸಿಕೊಂಡಿದ್ದಾರೆ. ನಾವು ಹೋಗಿದ್ದ ಉದ್ದೇಶ ಅಲ್ಲಿಯ ಘಟನೆಗಳನ್ನು ನೈಜವಾಗಿ ವರದಿಮಾಡು ವುದರ ಜೊತೆಗೆ–ಅದಕ್ಕಿಂತ ಮುಖ್ಯವಾಗಿ–ಅವರೆಲ್ಲರಲ್ಲಿ ಪ್ರತಿಭಟಿಸುವ ಚೈತನ್ಯ ಹುಟ್ಟಿಸುವುದಕ್ಕಾಗಿ, ಅವರಿಗಾಗಿ ನಾವು ಕೂಡ ಎಲ್ಲದಕ್ಕೂ ತಯಾರಾಗಿದ್ದೇವೆ ಎಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ.

ನಂಜ ಮತ್ತು ಮಾದಯ್ಯ ಅವರಿಗೆ ದಕ್ಕಿದ್ದ ಭೋಗ್ಯದ ಜಮೀ ನನ್ನು ಸಾಗುವಳಿಮಾಡಿ ಸಾಹುಕಾರರ ಮನೆಗೆ ನಂಜ, ಮಾದಯ್ಯ ದಳಪತಿ ದೊಡ್ಡಮಾದಯ್ಯ, ಪುಟ್ಟರಂಗನೊಡನೆ ಹೊರಟೆವು.

ಮೊದಲು ನಂಜನ ಜಮೀನನ್ನು ಅಕ್ರಮವಾಗಿ ಸಾಗುವಳಿಮಾಡಿದ ಮಾದೇವಪ್ಪನಮನೆಗೆ ಹೋದೆವು. ಮಾದೇವಪ್ಪ ಇರಲಿಲ್ಲ. ಅವನ ತಂದೆ ಮಾದಪ್ಪನಿಗೆ ನಮ್ಮ ಪರಿಚಯ ಹೇಳಿ, ನೀವೆಲ್ಲಾ ತಪ್ಪಾಗಿ ತಿಳಿದುಕೊಂಡು ನಂಜನ ಜಮೀನು ಸಾಗುಮಾಡಿದ್ದೀರಿ; ಇಂದಿರಾ ಗಾಂಧಿಯವರು ಹೋದರೆ ಅವರು ಮಾಡಿದ ಋಣವಿಮೋಚನೆ ಮತ್ತು ಜೀತನಿರ್ಮೂಲನೆ ಕಾನೂನು ಹೋಗಿಲ್ಲ. ಜನತಾಪಕ್ಷ ಅಧಿಕಾರದಲ್ಲಿ ದ್ದರೂ ಆ ಪಕ್ಷಕೂಡ ಆ ಕಾನೂನುಗಳನ್ನು ಮಾನ್ಯ ಮಾಡುತ್ತದೆ.

ನೀವು ಅನ್ಯಾಯ ಮಾಡಬೇಡಿ ಹಳ್ಳಿಯಲ್ಲಿ ಶಾಂತಿ ನೆಲಸಬೇಕು ಹಳ್ಳಿಯ ಪ್ರತಿಯೊಬ್ಬರೂ ಸಹೋದರ ಸಹೋದರಿಯರಂತೆ ಇರಿ. ನಾಳೆ ಹರಿಜನರೆಲ್ಲರೂ ಒಗ್ಗಟ್ಟಾಗಿ, ಜೊತೆಗೆ ನೀವೂ ಒಗ್ಗಟ್ಟಾಗಿ, ಹೊಡೆದಾಡಿ ಊರಲ್ಲಿ ಒಂದು ತಲೆಯೂ ನೆಲಕ್ಕೆ ಬೀಳದಿರಲಿ ಅವರ ಜಮೀನು ವಾಪಸ್ಸು ಬಿಟ್ಟುಬಿಡಿ ಎಂದಾಗ, ಮಾದಪ್ಪನವರ ಮನೆಯ ಹುಡುಗ ವೀರಭದ್ರಪ್ಪ, ಅವರ ಮನೆಯ ಹೆಂಗಸರು ನಮ್ಮೆದುರಿಗೇ ಹರಿಜನರನ್ನೆಲ್ಲಾ ಬೈಯ್ಯತೊಡಗಿದರು; ಅವರನ್ನೆ ಸಮಾಧಾನಪಡಿಸಿ ಮತ್ತೆ ಹರಿಜನರ ಒಗ್ಗಟ್ಟಿನ ಬಗ್ಗೆ 'ಎಚ್ಚರಿಕೆ' ಕೊಟ್ಟು ಮಾದಯ್ಯನ ಜಮೀನು ಸಾಗುವಳಿ ಮಾಡಿದ ಸುಬ್ಬಪ್ಪನ ಮನೆಯತ್ತ ನಡೆದೆವು.

ಊರಲ್ಲಿ ಗುಸುಗುಸು ಶುರುವಾಗತೊಡಗಿತ್ತು. ನಾವು ಸುಬ್ಬ ಪ್ಪನ ಮನೆ ತಲುಪಿದ ಕೆಲವು ಕ್ಷಣಗಳಲ್ಲಿಯೇ ಅನೇಕರು ಅಲ್ಲಿಗೆ ಧಾವಿ ಸಿದರು. ಸುಬ್ಬಪ್ಪ ಕೂಡ ಸಾಹುಕಾರತನದ ಸೊಕ್ಕಿನಿಂದಲೇ "ಯಾಕೆ? ಯಾಕೆ ಬಂದೀರಿ ?" ಎಂದು ಹೊರಬಂದರು.

ಕಕ್ರಟ್ಟಿ ಮಲ್ಲಪ್ಪನಮಗ ಮಾದಪ್ಪ "ಕಾನೂನು ಬಂದಾಗ ಬಿಟ್‌ಬುಡ್ತಾರೆ ನೀವು ಹೋಗ್ರಿ" ಎಂದು ಜೋರು ಮಾಡಿದ. ನಾನು ಅವನನ್ನು ಆತ್ಮೀಯತೆಯಿಂದಲೇ ಕರೆದು ನನ್ನಹತ್ತಿರ ಕೂರಿಸಿಕೊಂಡೆ.

ಸುಬ್ಬಣ್ಣನ ಮಗ ಮಾದಣ್ಣ "ಮರ್ಯಾದೆಯಿಂದ ಹೊರಟೋಗ್ರಿ" ಎಂದು ಹೇಳಿದಾಗ ಮಲ್ಲಿಕಾರ್ಜುನ ಅವರಲ್ಲಿಗೆ ಹೋಗಿ ಸಮಾಧಾನ ದಿಂದ ಇರಲು ಹೇಳಿ ಎಲ್ಲವನ್ನೂ ತಿಳಿಸಲು ಪ್ರಯತ್ನಿಸತೊಡಗಿದರು. ಅಷ್ಟರಲ್ಲಿ ನಾವು ಹೋಗಿದ್ದ ಮೊದಲನೆಯ ಮಾದಪ್ಪನ ಮಗ ಮಾದೇ ವಪ್ಪ ಬಂದು ಜೊತೆಗಿದ್ದ ಹರಿಜನರಿಗೆ "ಒಬ್ಬೊಬ್ರಿಗೆ ಹಡ್ಡೆ (ಚಟ್ಟ) ಕಟ್ಟಿ ಹೊರಸ್ತೀನಿ" ಎಂದು ಜೋರುಮಾಡಿದಾಗ ರಾಮದೇವ ರಾಕೆ ಅವನ ಹತ್ತಿರ ಹೋಗಿ ಹೇಗೆ ಜೋರುಮಾಡುವ ಅವಶ್ಯಕತೆಯಿಲ್ಲ ವೆಂದೂ, ನಾವು ಯಾಕೆ ಬಂದಿದ್ದೇವೆ ಎನ್ನುವುದನ್ನಾದರೂ ಅರ್ಥ

(6ನೇ ಪುಟ ನೋಡಿ)

# "ಮೂಗಿನಮೇಲೇಕೆ ಬೆರಳಿಟ್ಟುಕೊಂಡಿರುವೆ ಡಾ|| ಅಂಬೇಡ್ಕರ್?"

ಅಂಬೇಡ್ಕರ್! ಏಕೆ ಬಾಬಾ
ಮೂಗಿನ ಮೇಲೆ ಬೆರಳಿಟ್ಟುಕೊಂಡಿರುವೆ?
ಇದೇ ನನ್ನ ಜಯಂತಿ ಎಂದು ವಿಸ್ಮಯ ಪಡುತ್ತಿರುವೆಯಾ?
ಹೌದು ಅಂಬೇಡ್ಕರ್. ಇದೇ ನಿನ್ನ ಜಯಂತಿ.
ನಿನ್ನ ವರ್ಗದ ಯಾವ ಬಡಾನಾಯಕನ ಬಾಯಲ್ಲಿ ಕೇಳಿದರೂ,
ನಿನ್ನ ಜನಾಂಗದ ಮಿನಿ ಲೀಡರಾಗಲಿ, ನಿನ್ನ ಹೆಸರೇ!
ಯಾಕೋ, ಏನೋ ಅರ್ಥವಾಗದ ದಿನಗಳಲ್ಲಿ
ನಿನ್ನ ಪುಣ್ಯದಿಂದ ಲಂಗೋಟಿಗಳಲ್ಲಿ ಆ ಆ ಗಳನ್ನು ಕಲಿತೆವು.
ಶರಟು, ಪ್ಯಾಂಟು ಧರಿಸಿ, ನಿನ್ನ ರಿಸರ್ವೇಷನ್ನಗಳ
ಸೌಲಭ್ಯದಿಂದ ಉದ್ಯೋಗಗಳನ್ನು ಸಂಪಾದಿಸಿದೆವು.
ಜೇಬುಗಳನ್ನು ತುಂಬಿಸಿಕೊಳ್ಳುತ್ತಿದ್ದೇವೆ, ನಿನ್ನನ್ನು ಮರೆಯುತ್ತಿದ್ದೇವೆ.
ನಿನ್ನನ್ನು, ನಿನ್ನ ಜನಾಂಗವನ್ನು ಬಳಸಿಕೊಳ್ಳುತ್ತಿದ್ದೇವೆ-
ಅಗತ್ಯ ಬಿದ್ದಾಗಲೆಲ್ಲಾ.

ಯಾಕೆ ಗೊತ್ತೇ-
ಫಾಲ್ಸ್ ಪ್ರೆಸ್ಟೀಜಿಗಾಗಿ, ಬಡ್ತಿಗಳಿಗಾಗಿ
ಪ್ರಭಾವಕ್ಕಾಗಿ, ಸಮಾಜದಲ್ಲಿ
ಗಣ್ಯರೆಂದು ಚಲಾವಣೆಯಾಗುವುದಕ್ಕಾಗಿ
ನಿನ್ನ ರೂಪ ಗತಿಸಿದ ಇಪ್ಪತ್ತೇ ವರ್ಷಗಳಲ್ಲಿ
ನಿನ್ನ ಧ್ಯೇಯ, ಆಕಾಂಕ್ಷೆಗಳನ್ನು
ಪೂರ್ತಿ ಮರೆತ ನಾವು, ಅವುಗಳನ್ನು
ಕೇವಲ ಭಾಷಣಗಳಿಗಾಗಿ ಬಳಸುತ್ತಾ
ಸ್ವಲಾಭ ಗಳಿಸುತ್ತಿರುವ ನಾವು
ನಿನ್ನ ಜಯಂತಿಗಳನ್ನು ಆಚರಿಸುತ್ತಿದ್ದೇವೆ.
ಯಾಕೆ ಗೊತ್ತೇ!!
ನಿನ್ನನ್ನೂ, ನಿನ್ನ ಪೀಡಿತ ಪ್ರಜೆಗಳನ್ನೂ ಮೋಸಗೊಳಿಸಲೆಂದೇ
ನೀನು ತೋರಿಸಿದ ಮಾರ್ಗವನ್ನು, ನೇರವಾಗಿ ಅನುಸರಿಸಲಾಗದ
ಎಷ್ಟೋ ಬಣ್ಣ ಬಣ್ಣದ ಸಂಸ್ಥೆಗಳನ್ನು, ಜಾತಿ ಸಂಘಗಳನ್ನು
ಯಾವದ್ಭಾರತ ಸಂಸ್ಥೆಗಳನ್ನು ಸ್ಥಾಪಿಸುತ್ತಿದ್ದೇವೆ.
ಆ ದಿನ—
ನಿನ್ನ ಪ್ರಜೆ, ನಿನ್ನ ದೇಶ ಪ್ರಗತಿಗಾಗಿ ಮುನ್ನುಗ್ಗಿದೆ ನೀನು.
ಆದರೆ–ಈ ದಿನ ನಿನ್ನ ನೆರಳಲ್ಲಿ ಬದುಕುತ್ತಿರುವ ನಾವು
ಜನಾಂಗದ ಪ್ರಗತಿ ಪಥವನ್ನು ತಲೆಕೆಳಗು ಮಾಡಿ
ಪ್ರಗತಿ ವಿರೋಧಿಗಳಾಗಿ ಮುಂದೆ ಸಾಗುತ್ತಿದ್ದೇವೆ.
ಆದರೆ–ನಿನ್ನ ಹೆಸರಲ್ಲಿ, ನಮ್ಮ ಅವಕಾಶವಾದಿ ನೀತಿಯಿಂದಾಗಿ
ಉತ್ತಮೋತ್ತಮರಾಗುತ್ತಿದ್ದೇವೆ.
ನೀನು, ನಿನ್ನ ಅನುಯಾಯಿಗಳು ನಿರ್ಮಿಸಿದ
ಪ್ರಗತಿ ಪಥದಲ್ಲಿ ನಡೆದೆ
"ನನ್ನ ದೇಶ, ನನ್ನ ಪ್ರಜೆಗಳು" ಎಂದೆ
ಸಾಕೆಷ್ಟು ಸಾಧಿಸಿಯೂ ಸಾಧಿಸಿದೆ.
ಆದರೆ, ಈ ದಿನ
ಪದವಿಗಳಿಗಾಗಿ, ಪ್ರತಿಷ್ಠೆಗಾಗಿ
ಶಾಶ್ವತ ರಾಜಕೀಯ ಅಧಿಕಾರಕ್ಕಾಗಿ
ಬಡಾ ಉದ್ಯೋಗಗಳಿಗಾಗಿ
ಚಡಪಡಿಸುತ್ತಿರುವ ಕಾಲ ನಮ್ಮದು.
ನಿನ್ನ ಈ ದೇಶದಲ್ಲಿ ಎತ್ತ ನೋಡಿದರೂ,
ನಿನ್ನ ಪ್ರಜೆಗಳ ಸಜೀವದಹನ, ಮಾನಭಂಗ,
ಗೃಹದಹನ, ಬೆತ್ತಲೆ ಪ್ರದರ್ಶನ, ಬಹಿಷ್ಕಾರ
ದಿನ ದಿನ ತಾಂಡವವಾಡುತ್ತಿದ್ದರೂ
ನಮ್ಮಲ್ಲಿ ಚೈತನ್ಯ ಬಂದಿಲ್ಲ, ಬರುವುದೇ ಇಲ್ಲವೇನೋ!!
ನಿನ್ನ ಜನಾಂಗದ ನಾಯಕರಲ್ಲಿ "ರಿನೈಸಾನ್ಸ್" "ಪೇಕ್ಷೆನ್ಸ್"
ಉಳ್ಳ ನಾಯಕರು ಇದ್ದರೆ ತಾನೆ!?
ಇದ್ದಾರೆಂದುಕೊಂಡು, ಇದ್ದಾರೆಂದುಕೊಳ್ಳುತ್ತಾ ಮೋಸ
ಹೋದುದಕ್ಕೇನು
ಮೂಗಿನ ಮೇಲೆ ಬೆರಳಿಟ್ಟುಕೊಂಡಿರುವುದು!!
ತಾಯಿ ಬೇರಿನಿಂದ ಹಿಡಿದು ಮೇಲಿನ ಬಲಿತ ಎಲೆಯವರೆಗೂ
ಜವಾನನಿಂದ ಹಿಡಿದು ಬಡಾ ಆಫೀಸರ್‌ವರೆವಿಗೂ
ಬೋರ್ಡು ಮೆಂಬರಿಂದ ಹಿಡಿದು ಕೇಂದ್ರ ಮಂತ್ರಿಯವರೆಗೂ
ಅಣು ಅಣುಗಳಲ್ಲೂ ಹರಡಿರುವ ಬ್ಯಾಕ್ಟೀರಿಯಾವನ್ನು
ಧ್ವಂಸ ಮಾಡಲು, ನಮ್ಮಲ್ಲಿ ಉಳಿದಿರುವ ಜನತೆಯನ್ನು
ಜನಾಂಗದ ಮುಖಂಡರ ಏಕತೆ ಸಾಧಿಸಲು
ನಿನ್ನ ಜನಾಂಗದ ದ್ರೋಹಿಗಳನ್ನು ಶಿಕ್ಷಿಸಲು
ನೀನು ಅಂದುಕೊಂಡಿದ್ದ ಪ್ರಗತಿ ಸಾಧಿಸಲು
ನಿನ್ನಂತಹ ಮತ್ತೊಬ್ಬ ನಾಯಕ ನಮಗೆ ಜನಿಸಬೇಕು.
ಅಂದೇ ನಿನ್ನ ಶ್ರಮಕ್ಕೆ, ನಿನ್ನ ಜಯಂತಿಗೆ
ನಿನ್ನ ಜನಾಂಗದ ಆನಂದಕ್ಕೆ, ಅಸ್ತಿತ್ವಕ್ಕೆ
ಅರ್ಥ, ಪರಮಾರ್ಥ ಉಂಟು

ತೆಲುಗು ಮೂಲ: ಡಾ|| ಜಿ. ಬಲರಾಜು, ಡಾ|| ಯು. ರಾಮರಾವು
ಕನ್ನಡಕ್ಕೆ: ಕೆ. ನಾರಾಯಣಸ್ವಾಮಿ.

---

(5ನೇ ಪುಟದಿಂದ)

## .................ಶ್ರೀಮಂತರಿಂದ ದಲಿತರಿಗೆ ಚಿತ್ರಹಿಂಸೆ

ಮಾಡಿಕೊಳ್ಳಿ ಎಂದು ಹೇಳಿದರೂ, ನಾನು ಎಲ್ಲರಿಗೂ ಕೇಳುವಂತೆ "ನಾವೇನೂ ನಿಮ್ಮ ವೈರಿಗಳಲ್ಲ; ನ್ಯಾಯ ಕೇಳಾಕ ಬಂದಿದ್ದೀವಿ ನಮ್ಮ ಮಾತ ಒಂದಿಷ್ಟು ಕೇಳಿ" ಎಂದು ಕೂಗಿದರೂ ನಮ್ಮೆಲ್ಲರ ಮಾತುಗಳು ಅವರೆಲ್ಲರ ಕೊಂಕಿನ, ಉದ್ವೇಗದ, ದ್ವೇಷದ ಮಾತುಗಳಲ್ಲಿ ಕರಗತೊಡಗಿದವು. ನಾವು ಮಾತ್ರ ಶಾಂತಚಿತ್ತದಿಂದಲೇ ಮಾತಾಡುತ್ತಿದ್ದೆವು. ಹಾಗಿರದಿದ್ದರೆ ನಮಗೆ ಖಂಡಿತಾ ಹೊಡೆತಬೀಳುತ್ತಿದ್ದವು. ನಾವು ನಮ್ಮ ತಾಳ್ಮೆ ಕಳಕೊಂಡಿದ್ದರೆ, ಅಷ್ಟೊತ್ತಿಗಾಗಲೇ ನಮ್ಮ ಜೊತೆಗಿದ್ದ ಹರಿಜನ ಬಾಂಧವರೂ ಸಿಟ್ಟಿಗೆದ್ದು ತಮ್ಮ ವಾದ ಮಂಡಿಸತೊಡಗಿದ್ದರಿಂದ ಅಲ್ಲಿಯ ಲಿಂಗಾಯತ ಶ್ರೀಮಂತರ ಗತಿ ಏನಾಗುತ್ತಿತ್ತೋ ಏನೋ!

---

(1 ನೇ ಪುಟದಿಂದ)

ಕಂಡ ನಾನು ಏನು ಸ್ವಾಮಿ ಇಷ್ಟೊತ್ತಿನಲ್ಲಿ ಎಂದು ಕೇಳಲು ನಾವು ಕಳ್ಳರನ್ನು ಹಿಡಿಯಲು ಬಂದಿದ್ದೇವೆ, ಯಾಕೆ ಇಷ್ಟೊತ್ತಿನಲ್ಲಿ ಬಾಗಿಲು ತೆಗೆದಿರಿ ಎಂದು ನನಗೇ ರೇಗಿದರೆಂದು ನಾಗಮ್ಮ ತಿಳಿಸಿರುವಳು. ಹೊರ. ಗಡೆ ಹೋದ ಮೇಲೆ ಆ ಹುಡುಗಿ ನಡೆದದನ್ನು ತಿಳಿಸಿದಾಗ ನಾನು ಒಳಗೆ ಬಂದು ಕೇಳುವಷ್ಟರಲ್ಲಿ ಇನ್ಸ್‌ಪೆಕ್ಟರ್ ಜವಾನನಿಗೆ ಬಾಗಿಲು ಹಾಕಿಕೋ ಎಂದು ಹೇಳಿ ಹೊರಟು ಹೋದದ್ದಾಗಿ ತಿಳಿಸಿದ್ದಾಳೆ. ಇದೆಲ್ಲ ತಿಳಿದು ಶ್ರೀನಿವಾಸಪುರ ತಾಲೂಕಿನ ಬಿ. ಡಿ. ಓ, ತಹಸಿಲ್‌ದಾರ್, ಅಸಿಸ್ಟೆಂಟ್ ಸೋಷಿಯಲ್ ವೆಲ್‌ಫೇರ್ ಆಫೀಸರ್, ಅಸಿಸ್ಟೆಂಟ್ ಕಮಿಷನರ್, ಶೆಡ್ಯೂಲ್ಡ್ ಕ್ಯಾಸ್ಟ್ ಸೆಲ್‌ನ ಅಧಿಕಾರಿಗಳು ಬಂದು ತನಿಖೆ ನಡೆಸಿಕೊಂಡು ಹೋಗಿದ್ದು ಆ ಬಗ್ಗೆ ಇದುತನಕ ಯಾವ ಕ್ರಮವನ್ನೂ ಕೈಗೊಂಡಿಲ್ಲ.

# ಅಳಲು

## ಸವರ್ಣೀಯ ಜಮೀನ್ದಾರರ ಕಿರುಕುಳ

ಮಾನ್ಯರೇ,

ಲೋಕಸಭಾ ಚುನಾವಣೆಯ ಜನತಾ ಪಕ್ಷದ ವಿಜಯದ ಮರು ದಿನದಿಂದಲೇ ಹಾಸನ ಜಿಲ್ಲೆಯ ಅನೇಕ ಹಳ್ಳಿಗಳಲ್ಲಿ ಸವರ್ಣೀಯ ಜಮೀನ್ದಾರರು ಹರಿಜನರಿಗೆ ವಿಪರೀತ ಕಿರುಕುಳ ಕೊಡತೊಡಗಿದ್ದಾರೆ.

ಆಲೂರು ತಾಲ್ಲೂಕಿನ ಕೊಂಗಳ್ಳಿಯಲ್ಲಿ ತಮ್ಮ ದನಗಳಿಗೆ ನೀರು ಕುಡಿಸಲು ಕೆರೆಗೆ ಹೋದ ಹರಿಜನರಿಗೆ "ನಮ್ಮ ಕೆರೆಗೆ ಬರ್ಬೇಡಿ, ನಿಮ್ಮ ಇಂದ್ರಮ್ಮನ ಕೆರೇಗೆ ಹೊಡ್‌ಕೊಂಡ್ಹೋಗಿ" ಎಂದು ಬೈದು ವಾಪಸ್ಸು ಕಳಿಸಿದ್ದಾರೆ.

ಹಾಸನ ತಾಲ್ಲೂಕಿನ ಸಾಲಗಾಮೆಯಲ್ಲಿ "ಹೋಟ್ಲು ಒಳಗಡೆ ಇನ್ನು ಮುಂದೆ ಹೆಜ್ಜೆ ಇಡಬೇಡಿ. ನಿಮ್ಮ ಕಾಂಗ್ರೆಸ್ಸು ಹೊರಟೋಯ್ತು. ಕೈಯ್ಯಾಗೆ ಚಿಪ್ಪು ಹಿಡ್‌ಕಂಡು ಆಚೆಗೆ ನಿಲ್ಲಿ" ಎಂದು ಒತ್ತಾಯಿಸುತ್ತಿದ್ದಾರೆ.

ಅಲ್ಲದೆ "ಇನ್ನು ಮ್ಯಾಗೆ ನಮ್ಮ ಸರಕಾರ (ಜನತಾ ಪಕ್ಷ) ನಿಮ್ಮ ಹೊಲಾ ಗದ್ದೆ ಕಿತ್ಕತದೆ. ನಿಮ್ಮ ಮಕ್ಕಳಿಗೆ ಸ್ಕಾಲರ್‌ಶಿಪ್ ಕೊಡೋದನ್ನ ನಿಲ್ಲಿಸ್ತದೆ'' ಎಂದು ಪ್ರಚಾರ ಮಾಡುವುದರ ಜೊತೆಗೇ "ಮತ್ತೆ ಜೀತಕ್ಕೆ ಬನ್ರೋ" ಎಂದು ಕರೆಯುತ್ತಿದ್ದಾರೆ.

ಇದೆಲ್ಲ ಗೊತ್ತಿದ್ದೂ ಮುಂದಿನ ವಿಧಾನ ಸಭೆ ಚುನಾವಣೆಯಲ್ಲಿ ಇದನ್ನೇ ಮುಂದಿಟ್ಟು ಲಾಭ ಪಡೆಯುವ ಯೋಚನೆಯಿಂದ ಕಾಂಗ್ರೆಸ್‌ನವರು (ಸರಕಾರ) ಸುಮ್ಮನಿರುವುದೂ, ಹರಿಜನರು ನಮ್ಮ ಪಕ್ಷಕ್ಕೆ ಮತ ನೀಡಲಿಲ್ಲವೆಂದು ಜನತಾ ಪಕ್ಷದವರು ಧ್ವೇಷ ಸಾದಿಸುತ್ತಾ ಇತ್ತ ಕಡೆ ಗಮನ ಕೊಡದಿರುವುದೂ ಒಂದೇ ಆಗಿದ್ದು. ಇವರೆಲ್ಲಾ ಎಷ್ಟರ ಮಟ್ಟಿಗೆ ದಲಿತೋದ್ಧಾರ ಮಾಡುವರು ಎನ್ನುವುದು ಸ್ಪಷ್ಟವಾಗುತ್ತಿದೆ.

ಬನವಾಸೆ — ದೇವಿಕಾ ಬನವಾಸೆ
ಹಾಸನ ಜಿಲ್ಲೆ — ಬಿ. ಎಸ್. ಕುಮಾರ
ಬಿ. ಈ. ದೇವರಾಜು

## ಬದುಕುವುದೇ ಕಷ್ಟ

ಮಾನ್ಯರೆ,

ಈ ಸಲದ ಚುನಾವಣೆಯಲ್ಲಿ ದೀನ ದಲಿತರ ಬಗ್ಗೆ ಮೋಸದ ಮಾತನಾಡುತ್ತಾ ಬದುಕಿದ್ದ ಕಾಂಗ್ರೆಸ್ ಪಕ್ಷ ಸೋತಿರುವುದು ಸರಿಯಷ್ಟೆ. ಆದರೆ ಜನತಾ ಪಕ್ಷ ಅಧಿಕಾರಕ್ಕೆ ಬಂದ ಹೊಸದರಲ್ಲೇ ಹಳ್ಳಿಗಳಲ್ಲಿ ದಲಿತರು ಬದುಕುವುದೇ ಕಷ್ಟ ಎನ್ನುವುದೇ ಭಯದ ವಾತಾವರಣ ಉಂಟಾಗಿದೆ. ಉದಾಹರಣೆಗೆ ನಾನು ಅನುಭವಿಸಿದ್ದನ್ನು ಹೇಳುತ್ತೇನೆ.

ಮೊನ್ನೆ ತಾನೆ ಮೊದಲ ಮಳೆ ಬಿದ್ದಿದ್ದರಿಂದ ನಮಗಿರುವ ಮೂರು ಎಕರೆ ಹೊಲವನ್ನು ಉಳುವ ಎಂದು ನಾನೇ ಹೇರು ಕಟ್ಟಿದೆ. ಆದರೆ ಹೊಲವನ್ನು ಉಳದಂತೆ ಯಮ್ಮರಗಾಲದ ದೊಡ್ಡಮಾದಶೆಟ್ಟಿಯ ಮನೆಯವರು ನನ್ನನ್ನು ತಡೆದರು. ಯಾಕೆಂದು ಕೇಳಲು "ಈಗಿನ ಸರ್ಕಾರ ಯಾರ್ದು ಗೊತ್ತ ನಮ್ದು ಕಣಲೇ" ಎಂದು ಹೊಡೆಯಲು ಬಂದರು. ಆಶ್ಚರ್ಯದ ಜೊತೆಗೆ ಭಯ ಆಯಿತು. 45 ವರ್ಷಗಳ ಹಿಂದೆ 200 ರೂಪಾಯಿ ಸಾಲಕ್ಕಾಗಿ ಈ 3ಎಕರೆ ಹೊಲವನ್ನು ಯಮ್ಮರಗಾಲದ ದೊಡ್ಡಮಾದಶೆಟ್ಟಿಗೆ ನಮ್ಮ ತಾತ ಬೋಗ್ಯಕ್ಕೆ ಬರೆದುಕೊಟ್ಟಿದ್ದು, ಕಳೆದ ವರ್ಷ ಅಷ್ಟೇ ಈ ಋಣದಿಂದ ಮುಕ್ತವಾಗಿ (ಋಣ ವಿಮೋಚನಾ ಕಾನೂನಿನ ಪ್ರಕಾರ) ಜೀವನೋಪಾಯದ ಜಮೀನು ವಾಪಸ್ಸು ದಕ್ಕಿದ್ದಕ್ಕೆ ಸಂತೋಷಗೊಂಡಿದ್ದೆವು. ಆದರೆ ಈಗ ನನ್ನ ಹೊಲವನ್ನು ನಾನೇ ಉಳಲಾಗುತ್ತಿಲ್ಲ. ಕಾನೂನೆಲ್ಲ ಸುಳ್ಳೆ ಎಂದು ಭಯ ಆಗಿದೆ. 45ವರ್ಷ ಹಿಂದಿನ ಬರಿಯ 200ರೂಪಾಯಿ ಸಾಲಕ್ಕಷ್ಟೆ ನಮ್ಮ ಜೀವನೋಪಾಯದ 3ಎಕರೆ ಹೊಲವನ್ನು ಮತ್ತೆ ವಾಪಸ್ಸು ಕೊಡಬೇಕೇನೊ ಎಂದು ಗಾಬರಿಯಾಗಿದೆ. ಈಗ ನಮ್ಮಂತೆ ಬಹಳಷ್ಟು ಬಡವರಿಗೆ ಈ ತರಹ ಆಗಲು ಶುರುವಾಗಿವೆ. ಇಂಥ ವಿಷಯಗಳನ್ನು ಪೋಲೀಸರಿಗೆ ಮುಟ್ಟಿಸಿದರೆ "ನಮ್ಮ ಹತ್ತಿರ ಬರಬೇಡಿ ಅಸಿಸ್ಟೆಂಟ್ ಕಮೀಷನರ್ ಹತ್ತಿರ ಹೋಗಿ" ಎನ್ನುತ್ತಾರೆ. ಅಸಿಸ್ಟೆಂಟ್ ಕಮೀಷನರ್‌ರವರನ್ನು ಹುಡುಕಿಕೊಂಡು ಹೋದರೆ ಬರಿಯ ಬಾಗಿಲು ಕಾದು ವಾಪಸ್ಸು ಬರಬೇಕಾಗಿದೆ.

ಇತ್ತ ಸರಕಾರ ಗಮನ ಹರಿಸಿ ನಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಳುತ್ತೇವೆ.

—ಮಹದೇವಯ್ಯ ಮತ್ತು ಸೋದರರು.
ಕೂಡ್ಲಪುರ. ಮೈಸೂರು ಜಿಲ್ಲೆ

## ಉಳ್ಳವರ ದೌರ್ಜನ್ಯ

ಮಾನ್ಯರೆ,

ಈ ಬಾರಿ ಚುನಾವಣೆಯಲ್ಲಿ ಜನತಾ ಪಕ್ಷ ಅಧಿಕಾರಕ್ಕೆ ಬರುತ್ತಿದ್ದಂತೆ ಹರಿಜನ, ಗಿರಿಜನ, ಮುಸ್ಲಿಂ ಇತ್ಯಾದಿ ದಲಿತರು ದಿಕ್ಕು ಗೆಡುವಂತಾಗಿದೆ. ಇವರು ಕಾಂಗ್ರೆಸ್ಸಿಗೆ ಓಟುಕೊಟ್ಟರು ಎನ್ನುವ ಕಾರಣಕ್ಕಷ್ಟೆ, ಮೇಲ್ವರ್ಗದವರು, ಹಣವಂತರು ಇವರನ್ನು ಪ್ರಾಣಿಗಳಂತೆ ಹಿಂಸಿಸ ತೊಡಗಿದ್ದಾರೆ.

ಚಿತ್ರದುರ್ಗ ತಾಲ್ಲೂಕಿನ ಭರಮಸಾಗರ, ವಡ್ಡರಹಟ್ಟಿ, ಮತ್ತು ಬೇವಿನಹಳ್ಳಿ ಇತ್ಯಾದಿ ಊರುಗಳಲ್ಲಿ ನಡೆದ ಘಟನೆಗಳು ಎದೆ ಕರಗಿಸುತ್ತವೆ: ಚುನಾವಣಾ ಫಲಿತಾಂಶ ಗೊತ್ತಾಗುತ್ತಿದ್ದಂತೆ ಭರಮಸಾಗರದ ಮೇಲ್ಜಾತಿಯ ಹಣವಂತರು ವಡ್ಡರ ಹಟ್ಟಿಯ ಏಳೆಂಟು ಜನ ಬೋವಿಗಳನ್ನು "ಈಗ ನಮ್ಮ ಸರ್ಕಾರ ಅಧಿಕಾರಕ್ಕೆ ಬಂದಿದೆ ನಮ್ಮ ಜಮೀನು, ನಮ್ಮ ಸಾಲ, ಮತ್ತು ಗಿರವಿ ಸಾಮಾನುಗಳನ್ನು ವಾಪಸ್ಸು ಕೊಡಿ" ಎಂದು ರಾತ್ರಿ ಸಮಯದಲ್ಲಿ ಕೇರಿಗೆ ನುಗ್ಗಿ ಅಮಾನುಷವಾಗಿ ಥಳಿಸಿದ್ದರಿಂದ ಗಾಯಗೊಂಡ ಏಳೆಂಟು ಜನ ಬೋವಿಗಳು ಭರಮಸಾಗರದ ಆಸ್ಪತ್ರೆ ಸೇರಬೇಕಾಯಿತು. ಮತ್ತೆ ಇದೇ ಭರಮಸಾಗರದ ಮೇಲ್ಜಾತಿಯ ಹಣವಂತರು ಮಾರನೆಯ ದಿನ ಹಾಲು ಮಾರಲು ಬಂದ ಬೇವಿನಹಳ್ಳಿಯ ಲಂಬಾಣಿ ಮಹಿಳೆಯರನ್ನು ಹೀನಾಯವಾಗಿ ಬೈದು ಅವರ ಹಾಲಿನ ಪಾತ್ರೆಗಳಿಂದ ಹಾಲನ್ನು ಬೀದಿಗೆ ಚೆಲ್ಲಿ ಅವರು ಭರಮಸಾಗರಕ್ಕೆ ಕಾಲಿಡದಂತೆ ತಡೆದಿದ್ದಾರೆ. ಅಲ್ಲದೆ ಭರಮಸಾಗರದಲ್ಲಿ ವಾಸಕ್ಕಿರುವ ಹತ್ತನ್ನೆರಡು ಮನೆಯ ಬಡ ಮುಸ್ಲಿಮರು ಅಲ್ಲಿ ಜೀವಿಸುವುದೇ ಕಷ್ಟವಾಗಿದೆ. ಅವರ ಮನೆಗಳಿಗೆ ಕಲ್ಲು ತೂರುವುದು, ಸಿಕ್ಕಸಿಕ್ಕಲ್ಲಿ ಹೊಡೆಯುವುದು ಮಾಡುತ್ತಿದ್ದಾರೆ.

ಒಂದು ಕಡೆ ಋಣ ಪರಿಹಾರ, ಜೀತಪದ್ಧತಿ ರದ್ದು, ಇತ್ಯಾದಿ ಕಾನೂನುಗಳೆಲ್ಲ ಕಾಂಗ್ರೆಸ್ಸಿನ ಬೋಳೀಮಾತಿನಲ್ಲೇ ಉಳಿದು, ದಲಿತರಿಗೆ ಇನ್ನೂ ಸರಿಯಾಗಿ ಮುಟ್ಟಯೇ ಇಲ್ಲ. ಆದರೆ ಇನ್ನೊಂದು ಕಡೆ ಈ ಕಾನೂನುಗಳಿಂದ ದಲಿತರಿಗೆ ಬಹಳ ಅನುಕೂಲವಾಗುತ್ತಿದೆ ಎಂದು ಹಣವಂತರೆಲ್ಲ ಒಟ್ಟಾಗಿ ಈ ರೀತಿ ಕಿರುಕುಳ ಕೊಡುತ್ತಿರುವುದು ನೋಡಿದರೆ ಈಗಿರುವ ಯಾವ ರಾಜಕೀಯ ಪಕ್ಷಕ್ಕೂ ದಲಿತರ ಬಗ್ಗೆ ಕಾಳಜಿ ಇಲ್ಲವೇ ಇಲ್ಲ ಎನ್ನಿಸುತ್ತದೆ. ಹಣವುಳ್ಳವರು, ಭೂಮಿವುಳ್ಳವರು, ಮೇಲ್ಜಾತಿ ಮೇಲ್ವರ್ಗದವರೇ ತುಂಬಿಕೊಂಡಿರುವ ಈ ಪಕ್ಷಗಳನ್ನು ಮರೆತು ನಮ್ಮನ್ನು ನಾವು ಉಳಿಸಿಕೊಳ್ಳಲು ನಾವು ಈಗ ಬೇರೆ ತರಹ ಯೋಚಿಸಬೇಕಾಗಿದೆ. ದಲಿತರೆಲ್ಲ ಒಂದಾಗ ಬೇಕಾಗಿದೆ.

—ಲಾಲ್‌ಸಿಂಗ್ ನಾಯಕ್
ಜಂಬಯ್ಯ ಹಟ್ಟಿ, ಚಿತ್ರದುರ್ಗ ಜಿಲ್ಲೆ

# ದಲಿತ ಮನಸ್ಸಿನ ಅನಗತ್ಯ ದುಗುಡದ ಬಗ್ಗೆ

ಈ 77 ರ ಯುಗಾದಿ ಹಬ್ಬದ ದಿನ ಇಂದಿರಾಗಾಂಧಿಯವರು ಸೋತದಿನ. ಒಂದು ಹಳ್ಳಿಯಲ್ಲಿ ಹಬ್ಬದ ಅಡಿಗೆ ಮಾಡಿ ಸೊಸೆ ಅತ್ತೆ-ಯನ್ನು ಊಟಕ್ಕೆ ಕರೆದಾಗ ಅತ್ತೆ ಅಂದಳಂತೆ: "ಅಯ್ಯೋ ಹೋಗವ್ವ, ಎಂಥ ಸುಡುಗಾಡ್ ಊಟ. ಇಂದ್ರಮ್ಮನ ಮನೇಲಿ ಒಲೆ ಹತ್ಸಿದ್ದಾರೊ ಇಲ್ವೊ. ಅಡಿಗೆ ಮಾಡಿದ್ದಾರೊ ಇಲ್ವೊ."

ಮೇಲಿನಂತೆ ದಕ್ಷಿಣ ಭಾರತದ ಹರಿಜನಗಿರಿಜನ ಮುಸ್ಲಿಮ್ ಸಮುದಾಯ ನರಳಿರಬೇಕು. ನಮ್ಮ ಜನಾಂಗಗಳ ಉದ್ಧಾರಕರು ಕಾಂಗ್ರೆಸ್ಸೇ ಅದರಲ್ಲು ಇಂದಿರಾಗಾಂಧಿಯವರೇ ಎಂದು ಹರಿಜನ ಗಿರಿಜನ ಮುಸ್ಲಿಮರು ನಂಬಿದ್ದರಿಂದ ಇಂದಿರಾರವರು ಸೋತಾಗ ಈ ಜನಾಂಗ-ಗಳು ಆಧಾರ ತಪ್ಪಿದಂತೆ ಪರಿತಪಿಸಿವೆ. ಆ ನಂಬಿಕೆ ಹುಟ್ಟಿಸುವುದಕ್ಕೆ ಕಾಂಗ್ರೆಸ್ಸೂ ಇಂದಿರಾರು ತಕ್ಕಂಥ, ಮುಖವಾಡ ಧರಿಸಿ ನಾಟಕವಾಡಿದ್ದಾರೆ. ಕಾಂಗ್ರೆಸ್ ಇಂದ್ರಾ ನಾಟಕವು ದಕ್ಷಿಣದ ಕಡೆ ಜಯಗಳಿಸಿತು. ಅದೇ ಉತ್ತರದ ಕಡೆ ಹರಿಜನ ಗಿರಿಜನ ಮುಸ್ಲಿಮರು ಕಾಂಗ್ರೆಸ್ ಇಂದ್ರಾ ನಾಟಕಕ್ಕೆ ಚಪ್ಪಾಳೆ ತಟ್ಟದ ಪ್ರಯುಕ್ತ ಆಕಡೆ ಕಾಗ್ರೆಸ್ ಸೋತಿತು. ಕೇಂದ್ರದಲ್ಲಿ ಜನತಾ ಪಕ್ಷ ಅದಿಕಾರಕ್ಕೆ ಬರಲು ಉತ್ತರದ ಕಡೆ ಹರಿಜನ ಗಿರಿಜನ ಮುಸ್ಲಿಮರು ಜನತಾ ಪಕ್ಷಕ್ಕೆ ಮತ ನೀಡಿದ್ದೇ ಕಾರಣವಾಗಿದೆ. ಹಾಗಾಗಿ ಜನತಾ ಪಕ್ಷದ ಗೆಲುವು ಹರಿಜನ ಗಿರಿಜನ ಮುಸ್ಲಿಮರ ಗೆಲುವಾಗಿದೆ.

---

## ಕಿಡಿಗೇಡಿ ಕಣ್ಣೋಟ

ಆದಾಗ್ಯೂ ನಮ್ಮ ಜನಾಂಗಗಳು ಜನತಾ ಪಕ್ಷದ ಬಗ್ಗೆ ಅನುಮಾನ ಆತಂಕದಿಂದ ನರಳುತ್ತಿವೆ. ಹರಿಜನ ಗಿರಿಜನರಿಗೆ ಸಿಗುತ್ತಿದ್ದ ಸವಲತ್ತು ಮುಸ್ಲಿಮರಿಗೆ ಸಿಗುತ್ತಿದ್ದ ರಕ್ಷಣೆ ಮುಂತಾಗಿ ನಿಲ್ಲಬಹುದೇನೋ ಎಂಬ ಗಾಬರಿ ನಮ್ಮವರ ತಲೆ ಒಳಗೆ ಎದ್ದಿದೆ. ಇದಕ್ಕೆ ತಕ್ಕಂತೆ ಅನೇಕ ಹಳ್ಳಿಗಳಲ್ಲಿ ಜನತಾ ಪಕ್ಷ ಗೆದ್ದಿರುವುದರಿಂಜ ಜೀತಕ್ಕೆ ಬನ್ನಿ, ಬೋಗ್ಯ, ಸಾಲ, ಗಿರಿವಿ, ಎಲ್ಲಾ ಹೋಯ್ತು ಎಂದು ಮೇಲ್ಜಾತಿ ಮೇಲ್ವರ್ಗದವರು ಹರಿಜನ ಗಿರಿಜನರನ್ನು ಬಲಾತ್ಕರಿಸಿ ಗುಲ್ಲು ಮಾಡುತಿರುವರು. ಹರಿಜನ ಗಿರಿಜನ ಮುಸ್ಲಿಮರಿಗೆ ಹೇಗೋ ಹಾಗೆ ಮೇಲ್ಜಾತಿ ಮೇಲ್ವರ್ಗದವರಿಗೂ ಗೊತ್ತಿಲ್ಲ – ಏನೆಂದರೆ – ಉತ್ತರದ ಕಡೆ ಜನತಾ ಪಕ್ಷ ಗೆಲ್ಲದಿದ್ದರೆ ಜನತಾ ಪಕ್ಷ ಅದಿಕಾರಕ್ಕೆ ಬರುತ್ತಿರಲಿಲ್ಲ, ಉತ್ತರದಕಡೆ ಹರಿಜನ ಗಿರಿಜನ ಮುಸ್ಲಿಮ್ ಅಲ್ಪ ಸಂಖ್ಯಾತರು ಜನತಾ ಪಕ್ಷಕ್ಕೆ ಮತ ನೀಡದಿದ್ದರೆ ಜನತಾ ಪಕ್ಷ ಆ ಮಟ್ಟಿಗೆ ಗೆಲ್ಲುತ್ತಿರಲಿಲ್ಲ. ಉತ್ತರ ಭಾರತದ ಹರಿಜನ ಗಿರಿಜನ ಮುಸ್ಲಿಮ್ ಅಲ್ಪ ಸಂಖ್ಯಾತರು ಕಣ್ಣು ತೆರೆದು ಜನತಾ ಪಕ್ಷಕ್ಕೆ ಮತ ನೀಡಿದ್ದರಿಂದಲೇ, ಕೇಂದ್ರದಲ್ಲಿ ಜನತಾ ಪಕ್ಷ ಅದಿಕಾರಕ್ಕೆ ಬಂತು. ಇತಿಹಾಸದ ವೇಗ ದ್ವಿಗುಣಗೊಂಡಿತು.

ಈಗ ಜನತಾಪಕ್ಷ ಅಧಿಕಾರಕ್ಕೆ ಬಂದಿದೆ, ಹಳ್ಳಿಗಳ ಕಡೆ ಗುಲ್ಲಾಗಿರುವಂತೆ ಜೀತ ಸಾಲ ಗಿರವಿ ಭೋಗ್ಯ ಇತ್ಯಾದಿ ಮತ್ತೆ ಬರುವುದಿಲ್ಲ. ಬಂದರೆ ಜನತಾ ಪಕ್ಷ ಅಧಿಕಾರದಲ್ಲಿ ಉಳಿಯಲು ಸಾಧ್ಯವಾಗುವುದಿಲ್ಲ. ಕಾಂಗ್ರೆಸ್ ಕಲ್ಪಿಸಿಕೊಂಡಿರುವ ಅನುಕೂಲದ ಎರಡರಷ್ಟನ್ನಾದರೂ ಜನತಾ ಪಕ್ಷವು ಹರಿಜನ ಗಿರಿಜನ ಮುಸ್ಲಿಮ್ ಅಲ್ಪ ಸಂಖ್ಯಾತರಿಗೆ ಕಲ್ಪಿಸಿಕೊಡಬೇಕಾಗುತ್ತದೆ. ಯಾಕೆಂದರೆ ಉತ್ತರದ ಕಡೆ ಹರಿಜನ ಮುಸ್ಲಿಂ ಅಲ್ಪ ಸಂಖ್ಯಾತರು ಜನತಾ ಪಕ್ಷಕ್ಕೆ ಮತ ನೀಡಿರುವುದರಿಂದಲೇ ಜನತಾ ಪಕ್ಷ ಅಧಿಕಾರಕ್ಕೆ ಬರಲು ಸಾದ್ಯವಾಗಿರುವುದು. ಮತ್ತೂ ಅಂದರೆ ಜನತಾ ಪಕ್ಷದ ನೀತಿಯಲ್ಲೇ ನಮ್ಮ ಜನಾಂಗಗಳ ಅನೇಕ ಸಮಸ್ಯೆಗಳು ಬಗೆಹರಿಯುವಲ್ಲಿ ಕಾರ್ಯಕ್ರಮಗಳಿವೆ. ಈಗ ಒಂದೆರಡು ನೋಡಿ – ಆಸ್ತಿ ಹಕ್ಕು ರದ್ದಾಗುವುದು ಕೆಲಸದ ಹಕ್ಕು ದಕ್ಕುವುದು ಮದ್ಯಪಾನ ರದ್ದಾಗುವುದು, ಹರಿಜನ ಗಿರಿಜನರಿಗೆ ಸವಲತ್ತನ್ನು ಶೇಕಡಾ 25 ರಿಂದ 33 ರ ವರೆಗೆ ಹೆಚ್ಚಿಸುವ ಭರವಸೆ ಇತ್ಯಾದಿ.

ಜನತಾ ಪಕ್ಷ ತಾನು ಹೇಳಿದ ಈ ಕಾರ್ಯಕ್ರಮಗಳನ್ನು ಕಾರ್ಯಗತ ಮಾಡದಿದ್ದರೆ ಏನು ಮಾಡೋಣ. ? ದೆಹಲಿ ಜುಮ್ಮಾ ಮಸೀದಿಯ ಶಾಹಿ ಇಮಾಂ ನುಡಿದ; "ಜನತಾ ಪಕ್ಷ ಮಾತಿಗೆ ತಪ್ಪಿದರೆ ನನ್ನ ಕೋಲು ಅದರ ತಲೇ ಮೇಲೆ ಇರುತ್ತದೆ." ಎಂಬ ಮಾತನ್ನು ನೆನಪಿಟ್ಟುಕೊಳ್ಳೋಣ. ಅದನ್ನು ಕಾರ್ಯಗತ ಮಾಡೋಣ. ಎಲ್ಲಕ್ಕೂ ಇದೇ ಮದ್ದು.

---

Statement about ownership and other particulars about Newspaper PANCHAMA, to be published in the first issue every year after the last day of February.

FORM IV

| | |
|---|---|
| 1. Title of Newspaper | PANCHAMA |
| 2. Registration Number of the Newspaper | R.N. 29681/76 |
| 3. Language/Languages in which it is publishd | Kannada |
| 4. Periodicity of its publication and the day/days/dates on which it is published | Fortnightly |
| 5. Retail price of the Newspaper | 20 paise |
| 6. Publisher's Name | Sri H. Govindaiah |
| Nationality | Indian |
| Address | 516, 15th Main, Saraswathipuram, Mysore-9 |
| 7. Printer's Name | Sri H Govindaiah |
| Nationality | Indian |
| Adress | 516, 15th Main, Saraswathi puram, Mosore-9 |
| 8. Editor's Name | Sri Ramadev Rake |
| Nationality | Indian |
| Address | 516, 15th main Saraswathipuram, Mysore-9 |
| 9. True and precise account of the premises where the printing is conducted. | Andolana Mudrana 2649/2, B B & Sons Road, K G. Koppal, Mysore-9 |
| 10. Place of publication | Mysore-9 |

I, H. GOVINDAIAH, here by declare that the particulars given above are true to the best of my knowledge and belief.

Mysore
10-4-77

H. GOVINDAIAH
Signature of publisher

---

ಸಂಪಾದಕ : ರಾಮದೇವ ರಾಕೆ, ಜೊತೆಗೆ : ಶಿವಾಜಿಗಣೇಶನ್, ಶಿವಮಲ್ಲ ದೇವನೂರು, ಪ್ರಕಾಶಕ : ಹೆಚ್. ಗೋವಿಂದಯ್ಯ
ವಿಳಾಸ : 2649/2, ಕೆ.ಜಿ. ಕೊಪ್ಪಲ್, ಮೈಸೂರು-9. ಮುದ್ರಣ : ಆಂದೋಲನ ಮುದ್ರಣ, ಮೈಸೂರು-9